# PART V.

—:0:—

## The Ten Incarnations of Vishnu.

—:0:—

### 75. The First or Fish Incarnation.

### ೭೫. ಮತ್ಸ್ಯಾವತಾರದ ಕಥೆ.

ಪರಮ ಪದದಲ್ಲಿ ಶ್ರೀಮನ್ನಾರಾಯಣನು ಮಹಾ ಲಕ್ಷ್ಮೀ ಸಮೇತನಾಗಿ ನಿತ್ಯೈಶ್ವರ್ಯವನ್ನು ಅನುಭವಿಸುತ್ತ—ನಾನು ಬಹು ಪ್ರಜೆಯಾಗುವೆನು ಎಂದು ಸಂಕಲ್ಪ ಮಾಡಿದ್ದಾಗಿ, ವೇದಾಂತದಲ್ಲಿ ಹೇಳಿರುವ ಪ್ರಕಾರ ಜಗತ್ತುಗಳನ್ನು ನಿರ್ಮಿಸಿ, ಬಹು ರೂಪಾಗಿ ಲೀಲೈಶ್ವರ್ಯವನ್ನು ಅನುಭವಿಸ ಬೇಕೆಂದು ಸಂಕಲ್ಪಿಸಿ, ಚಿತ್ತು ಅಚಿತ್ತುಗಳೇ ಮೊದಲಾದ ತನ್ನಲ್ಲಿರುವ ಸೂಕ್ಷ್ಮ ತತ್ವಗಳಿಂದ, ಸ್ಥೂಲ ಚಿದಚಿತ್ತು ಮೊದಲಾದ ತತ್ವಗಳ ಮಯವಾಗಿ, ಚತುರ್ಮುಖ ಬ್ರಹ್ಮನನ್ನು ತನ್ನ ನಾಭೀ ಕಮಲದಲ್ಲಿ ಹುಟ್ಟಿಸಿ, ಅವನನ್ನು ಕುರಿತು,—ಕೃತ, ತ್ರೇತಾ, ದ್ವಾಪರ, ಕಲಿಗಳೆಂಬ ನಾಲ್ಕು ಯುಗಗಳು ಸಾವಿರ ಸಾರಿ ಮರಳಿ ಬಂದರೆ, ಒಂದು ಹಗಲು ನಿನಗೆ ಆಗುವದು. ಆ ಹಗಲಿನಲ್ಲಿ ನೀನು ಹದಿನಾಲ್ಕು ಲೋಕಗಳನ್ನು ಸೃಷ್ಟಿಸು. ಅವುಗಳು ನಿನ್ನ ಹಗಲಿನಲ್ಲಿ ಪ್ರಕಾಶಿಸುತ್ತಾ ಇರುವವು. ತಿರಿಗಿ ನಿನ್ನ ರಾತ್ರಿಯಲ್ಲಿ ಅವಾಂತರ ಪ್ರಳಯವನ್ನು ಹೊಂದುವವು. ಆ ರಾತ್ರಿಯಲ್ಲಿ ಹಗಲಿನ ಪ್ರಕಾರವೇ ನಾಲ್ಕು ಯುಗಗಳು ಸಾವಿರ ಸಾರಿ ಮರಳುವ ಪರಿಯಂತರ ನೀನು ಮಲಗಿದ್ದು, ಪುನಹ ಬೆಳಗಾಗುವಾಗ ಸೃಷ್ಟಿಯನ್ನು ಮಾಡುತ್ತಾ, ಈ ರೀತಿಯಲ್ಲಿ ನೂರು ವರುಷ ಪರಿಯಂತರವು ಬ್ರಹ್ಮ ಪಟ್ಟವನ್ನಾಳುತ್ತಾ ಇದ್ದು, ಆ ನಿನ್ನ ನೂರು ವರುಷದ ಕಡೆಯಲ್ಲಿ ಮಹಾ ಪ್ರಳಯವು ಉಂಟಾಗಲು, ನೀನು ಯಥಾ ಪ್ರಕಾರ ನನ್ನಲ್ಲಿ ಬಂದು ಶೇರು, ಎಂದು ಅಪ್ಪಣೇ ಕೊಟ್ಟನು.

ಅದನ್ನು ಕೇಳಿ, ಬ್ರಹ್ಮನು ಶ್ರೀಮನ್ನಾರಾಯಣನಿಗೆ ನಮಸ್ಕರಿಸಿ—ಎಲೈ, ಸ್ವಾಮಿಯೇ, ನಾನು ಯಾವ ಶಕ್ತಿಯಿಂದ ಲೋಕಗಳನ್ನು ಸೃಷ್ಟಿಸಲಿ? ಎಂದು ಬಿನ್ನಹವನ್ನು ಮಾಡಿ ಕೊಳ್ಳಲು; ಮಹಾ ವಿಷ್ಣುವು ಆತನಿಗೆ ಸಕಲ ವೇದಗಳನ್ನು ಉಪದೇಶಿಸಿ, ವೇದ ಪುಸ್ತಕಗಳನ್ನು ಕೊಟ್ಟು—ಈ ವೇದಗಳ ಬಲದಿಂದ ಜಗತ್ತನ್ನು ಸೃಷ್ಟಿಸು ಎಂದು ಅಪ್ಪಣೇ ಕೊಟ್ಟು, ತಾನು ಮೊದಲು ಉದಕವನ್ನು ನಿರ್ಮಿಸಿ, ಅದರ ಮೇಲೆ ಬ್ರಹ್ಮಾಂಡವನ್ನು ಕಲ್ಪಿಸಿ, ಅದರೊಳಗೆ ಆ ಬ್ರಹ್ಮ

ನನ್ನು ಇಟ್ಟು, ತಾನೂ ಲಕ್ಷ್ಮೀ ಸಮೇತನಾಗಿ ಪ್ರವೇಶಿಸಿ, ಕ್ಷೀರ ಸಮುದ್ರದಲ್ಲಿ ಶೇಷ ಶಾಯಿಯಾಗಿ ಯೋಗ ನಿದ್ರೆಯನ್ನು ಮಾಡುತ್ತಾ ಇದ್ದನು.

ಇತ್ತಲಾ ಚತುರ್ಮುಖ ಬ್ರಹ್ಮನು ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ, ಎಂಬ ಏಳು ಲೋಕಗಳನ್ನು ಮೇಲು ಗಡೆಯಲ್ಲಿಯೂ; ಅತಲ, ವಿತಲ, ಸುತಲ, ತಲಾತಲ, ರಸಾತಲ, ಮಹಾತಲ, ಪಾತಾಳಗಳೆಂಬ ಏಳು ಲೋಕಗಳನ್ನು ಕೆಳಗಡೆಯಲ್ಲಿಯೂ; ಹೀಗೆ ಹದಿನಾಲ್ಕು ಲೋಕಗಳನ್ನು ನಿರ್ಮಿಸಿ, ಅವುಗಳಲ್ಲಿ ವೇದವು ಹೇಳಿರುವ ಪ್ರಕಾರ ತಕ್ಕ ತಕ್ಕ ಸ್ವೇದಜ, ಅಂಡಜ, ಉದ್ಭಿಜ, ಜರಾಯುಜಗಳೆಂಬ ನಾಲ್ಕು ವಿಧಗಳಾದ ಸ್ಥಾವರ ಜಂಗಮಗಳನ್ನು ಕಲ್ಪಿಸಿ; ಇನ್ನು ನವ ಬ್ರಹ್ಮರೂ, ಹದಿನಾಲ್ಕು ಮನುಗಳೂ, ಸೂರ್ಯ ಚಂದ್ರರೂ, ಇಂದ್ರಾದಿಗಳೂ, ಮೊದಲಾದ ಅಧಿಕಾರಿಗಳನ್ನು ಸೃಷ್ಟಿಸಿ, ಅವರವರಿಗೆ ತಕ್ಕ ಅಧಿಕಾರಗಳನ್ನು ಕಟ್ಟು ಮಾಡಿ ಇರುತ್ತಾ, ವಿಷ್ಣುವಿನ ಆಜ್ಞೆಯ ಪ್ರಕಾರ ನಡೆದುಕೊಂಡಿದ್ದನು. ಆ ಬ್ರಹ್ಮನ ರಾತ್ರಿಯ ಅವಾಂತರ ಪ್ರಳಯವೆಂಬ ಜಲ ಪ್ರಳಯದ ಮನುಷ್ಯ ಮಾನದ ಮುಂಚಿನ ದಿನದಲ್ಲಿ ಈ ಭೂಮಂಡಲಕ್ಕೆ ಅರಸಾಗಿದ್ದಂಥ ಸತ್ಯಾಚರಣೆಯೂ ಭಗವದ್ಭಕ್ತಿಯೂ, ಪ್ರಜಾ ರಂಜನೆಯೂ ಇವುಗಳು ಮೊದಲಾದ ಸಕಲ ಸದ್ಗುಣಗಳುಳ್ಳ ಸತ್ಯವ್ರತ ರಾಯನು ಪ್ರಾತಸ್ನಾನಕ್ಕೆ ಗಂಗಾ ನದಿಗೆ ಬಂದು, ಮಿಂದು, ಶುಚಿರ್ಭೂತನಾಗಿ, ಸಂಧ್ಯಾ ವಂದನೆಯನ್ನು ಮಾಡುವದಕ್ಕೆ ಪ್ರಾರಂಭಿಸಿ, ಸೂರ್ಯನಿಗೆ ಅರ್ಘ್ಯ ಪ್ರದಾನವನ್ನು ಮಾಡಲು, ತನ್ನ ಬೊಗಸೆಯಲ್ಲಿ ಗಂಗಾ ಜಲವನ್ನು ಎತ್ತಿ ಕೊಂಡು, ಆ ನದಿಯಲ್ಲಿ ಬಿಡ ಬೇಕೆಂದಿರುವಾಗ, ಆ ಬೊಗಸೆಯಲ್ಲಿರುವ ನೀರಿನಲ್ಲಿ ಒಂದು ಸಣ್ಣ ಮೀನಿನ ಪಿಳ್ಳೆಯು ಅರಸನ ಕಣ್ಣಿಗೆ ಕಾಣಿಸಿದ್ದರಿಂದ, ಆ ಮೀನಿನ ಮರಿಯನ್ನು ಅರ್ಘ್ಯದ ನೀರಿನಲ್ಲಿ ಕೂಡಿಸಿ, ಅರ್ಘ್ಯವನ್ನು ಬಿಡ ಬಾರದೆಂದು, ಆ ನೀರನ್ನು ಸುಮ್ಮನೆ ನದಿಯಲ್ಲಿ ಬಿಟ್ಟು, ತಿರಿಗಿ ಬೊಗಸೇ ತುಂಬಾ ನೀರು ಎತ್ತಲು; ತಿರಿಗೂ ಆ ಬೊಗಸೆಯ ನೀರಿನಲ್ಲಿ ಅದೇ ಮೀನಿನ ಮರಿಯು ಕಾಣ ಬಂತು. ಹೀಗೆ ಎಷ್ಟು ಸಾರಿ ಬಿಟ್ಟು ಬಿಟ್ಟು, ತಿರಿಗಿ ನೀರನ್ನು ಬೊಗಸೆಯಲ್ಲಿ ಎತ್ತುತ್ತಾ ಇದ್ದರೂ, ಆ ಮರಿಯು ಕಾಡುತ್ತಾ ಬಂದದರಿಂದ, ಅದನ್ನು ತಿರಿಗಿ ಅರಸನು ನೀರಿನಲ್ಲಿ ಬಿಡ ಬೇಕೆಂದಿರುವಲ್ಲಿ, ಆ ಮರಿಯು ಈ ಅರಸನನ್ನು ಕುರಿತು—ಎಲೈ, ಸತ್ಯವ್ರತನೇ, ನೀನು ಬಹು ಧರ್ಮಿಷ್ಠನೂ ಕರುಣೆಯುಳ್ಳವನೂ ಪ್ರಾಣಿ ಹಿತನೂ ಎಂದು ತಿಳಿದು, ನಾನು ಈ ಹೊಳೆಯಲ್ಲಿ ಬೆಸ್ತರ ಬಲೆಯಿಂದ ಉಂಟಾಗುವ ಸಂಕಟವನ್ನು

ತಪ್ಪಿಸಿ ಕೊಳ್ಳುವದಕ್ಕಾಗಿ ನಿನ್ನ ಕೈಗೆ ಬಂದು, ಮರೆ ಹೊಕ್ಕೆನು. ಅಂಥ ನನ್ನನ್ನು ನೀನು ಅನಾದರಣೇ ಮಾಡಿ, ಬಿಟ್ಟು, ಬಿಡ ಬಹುದೇನಯ್ಯಾ, ಧರ್ಮಾತ್ಮನೇ? ಎಂದು ಹೇಳಿತು.

ಆ ಮಾತನ್ನು ಕೇಳಿ, ಕರುಣೆಯೂ ಆಶ್ಚರ್ಯವೂ ಹೆಚ್ಚಾಗಿ ಮನಸ್ಸಿನಲ್ಲಿ ಹುಟ್ಟಿ—ಬಾರೈ, ಮೀನು ಮರಿಯೇ, ಎಂದು, ಆ ಮರಿ ಸಹಿತವಾಗಿ ಬೊಗಸೆಯಲ್ಲಿ ಇದ್ದ ನೀರನ್ನು ಸಮೀಪದಲ್ಲಿ ಇದ್ದ ಅರ್ಘ್ಯ ಪಾತ್ರೆಯಲ್ಲಿ ಬಿಟ್ಟು, ಸಂಧ್ಯಾಕರ್ಮದಲ್ಲಿ ಕುಳಿತು ಕೊಂಡಿದ್ದನು. ಅಷ್ಟರಲ್ಲಿಯೇ ಆ ಅಂಗುಷ್ಟ ಮಾತ್ರ ಪ್ರಮಾಣವಾಗಿದ್ದ ಮೀನಿನ ಪಿಳ್ಳೆಯು ಆ ಅರ್ಘ್ಯ ಪಾತ್ರೆಯ ತುಂಬಾ ಬೆಳೆದು, ಆ ರಾಯನನ್ನು ಕುರಿತು—ಎಲೈ, ಮಹಾ ರಾಯನೇ, ನನ್ನನ್ನು ನೋಡು. ನನಗೆ ಈ ಕೊಂಚವಾದ ಅರ್ಘ್ಯ ಪಾತ್ರೆಯು ನೀರು ಸಾಕೇ? ಎನಲು; ರಾಯನು ಅದನ್ನು ನೋಡಿ,—ಇದು ಸಾಧಾರಣವಾದ ಮೀನಲ್ಲ. ದೈವಿಕದ ಮೀನೆಂದು ತಿಳಿದು, ಅಲ್ಲಿದ್ದ ನೀರಿನ ಗಡಿಗೆಯಲ್ಲಿ ಬಿಟ್ಟ ಕ್ಷಣವೇ ಅದರ ತುಂಬಾ ಬೆಳೆಯಲು; ಅಲ್ಲಿಂದ ತೆಗೆದು, ಒಂದು ಕಡಾಯಿ ನೀರಿನಲ್ಲಿ ಬಿಟ್ಟಾಗ್ಯೂ, ಅಲ್ಲಿಯೂ ಅದರ ತುಂಬಾ ಬೆಳೆಯಲು; ಅದನ್ನು ಕಂಡು, ಆ ರಾಯನು—ಇದರ ಬೆಳವಿಗೆಗೆ ಯಾವ ನೀರೂ ಸಾಕಾಗುವದಿಲ್ಲ. ಸಮುದ್ರದ ನೀರೇ ಸರಿ ಎಂದು, ತನ್ನ ಮನಸ್ಸಿನಲ್ಲಿ ನಿಶ್ಚೈಸಿ, ಸಮುದ್ರದಲ್ಲಿ ತೆಗಿಸಿ ಕೊಂಡು ಹೋಗಿ ಬಿಡಲು, ಅದು ಅಲ್ಲಿ ಮಹಾದ್ಭುತಾಕಾರವಾಗಿ ಬೆಳೆದು, ಸಮುದ್ರದಲ್ಲಿ ಸಂಚಾರ ಮಾಡುತ್ತ, ಈ ರಾಯನಿಗೆ ನಾಲ್ಕು ತೋಳುಗಳಿಂದ ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿ, ದಿವ್ಯ ಕಿರೀಟ, ಕುಂಡಲ, ಕಟಕ, ಕೇಯೂರಾದಿ, ಭೂಷಣಗಳಿಂದಲೂ ಪೀತಾಂಬರದಿಂದಲೂ ಅಲಂಕೃತವಾಗಿ, ಶ್ರೀ ಮಹಾ ಲಕ್ಷ್ಮೀ ಸಮೇತವಾಗಿ ಮತ್ಸ್ಯಾಕಾರದಿಂದ ಕಾಣಿಸಿ ಕೊಂಡು, ಆ ರಾಯನನ್ನು ಕುರಿತು—ಎಲೈ, ರಾಯನೇ, ನಿನ್ನ ಪರಿವಾರಗಳನ್ನು ಪಟ್ಟಣಕ್ಕೆ ಅಪ್ಪಣೇ ಕೊಟ್ಟು ಕಳುಹಿಸಿ, ನೀನೊಬ್ಬನೇ ನಾನಾಡುವ ಮಾತುಗಳನ್ನು ಕೇಳು ಎಂದು ಹೇಳಿತು.

ಆ ರಾಯನು ಆ ಮಾತನ್ನು ಕೇಳಿ, ಆ ಕ್ಷಣದಲ್ಲಿಯೇ ತನ್ನ ಪರಿವಾರಗಳನ್ನೆಲ್ಲಾ ಕಳುಹಿಸಿ ಬಿಟ್ಟು, ಒಬ್ಬನೇ ಕೈ ಮುಗಿದು, ನಿಂತು ಕೊಂಡು—ಏನು ಅಪ್ಪಣೇ? ಎಂದು ಕೇಳುವದು;—ಈ ಹೊತ್ತಿಗೆ ಏಳನೇ ದಿವಸಕ್ಕೆ ಜಲ ಪ್ರಳಯವಾಗಿ ಭೂಮಿಯು ಕಾಣದೆ ಹೋಗುವದು. ಅದುಕಾರಣ ನೀನು ನಿನ್ನ ಕುಟುಂಬದ ಸಂಗಡ ಇನ್ನು ಮೇಲೆ ಬರುವ ಯುಗದಲ್ಲಿ ಹುಟ್ಟುವ ಪ್ರಜೆಗಳಿಗೆ ಜೀವನೋಪಾಯಕ್ಕೆ ಬೇಕಾದ ಬೀಜಗಳನ್ನು ಸಂಗ್ರಹಾ ಮಾಡಿ ಕೊಂಡು, ಇಂದಿ

ಗೆ ಆರನೇ ದಿವಸದ ರಾತ್ರಿಗೆ ಇದೇ ಸ್ಥಳಕ್ಕೆ ಬಂದಲ್ಲಿ, ಆವಾಗ್ಯೆ ಈ ಮಹಾ ನನ್ನ ಮತ್ಸ್ಯಾಕೃತಿಯನ್ನು ನೋಡುವಿ. ಆಗ ನನ್ನ ಕೋರೆಯಲ್ಲಿ ಸಿಕ್ಕಿ ಅಲ್ಲಾಡುತ್ತಲಿರುವ ಒಂದು ಹಡಗು ಕಾಣಿಸುವಾಗ, ಆ ಹಡಗಿನಲ್ಲಿ ನಿನ್ನ ಕುಟುಂಬದ ಸಂಗಡ ಸಕಲ ಧಾನ್ಯೌಷಧಿ ಬೀಜಗಳನ್ನು ತೆಗೆದು ಕೊಂಡು, ಹತ್ತು. ಆ ಮೇಲೆ ನಡೆಯುವ ಕಾರ್ಯಗಳನ್ನು ನೀನೇ ತಿಳಿಯುತ್ತೀ ಎಂದು ಅಪ್ಪಣೇ ಕೊಟ್ಟು, ಸಮುದ್ರಾಂತರ್ಜಲ ಪ್ರವೇಶವನ್ನು ಮಾಡಿತು. ಆ ಬಳಿಕ ಆ ರಾಯನು ಮಹಾ ವಿಷ್ಣುವಿನ ಆಜ್ಞೆಯನ್ನು ಶಿರಸಾ ವಹಿಸಿ, ತನ್ನ ಪಟ್ಟಣಕ್ಕೆ ಬಂದು, ರಾಜ್ಯದ ಎಲ್ಲಾ ಪ್ರಜೆಗಳಿಗೂ—ನೀವೆಲ್ಲರು ವಿಷ್ಣುವಿನ ಧ್ಯಾನವನ್ನು ಮಾಡಿ ಕೊಂಡು, ಮೋಕ್ಷ ರಾಜ್ಯದಲ್ಲಿ ಶೇರಿ, ಸುಖ ಪಡಿರಿ ಎಂದು, ಡಂಗುರವನ್ನು ಹೊಯ್ಸಿ, ಸಾರಿಸಿ, ತಾನು ಮಹಾ ವಿಷ್ಣುವಿನ ಅಪ್ಪಣೆಯ ಪ್ರಕಾರ ಬಂದು, ಹಡಗವನ್ನೇರಿದ ಉತ್ತರ ಕ್ಷಣದಲ್ಲಿಯೇ ಭೂಮಿಯು ಸಮುದ್ರದಲ್ಲಿ ಮುಳುಗಿ ಹೋಯಿತು. ಆಗಲಾ ರಾಯನು ಸಮುದ್ರದಲ್ಲಿ ಹಡಗಿನ ಮೇಲೆ ಸಂಚರಿಸುತ್ತಾ, ಆಗಾಗ್ಯೆ ಮತ್ಸ್ಯ ಮೂರ್ತಿಯ ಸಂದರುಶನವನ್ನು ಮಾಡುತ್ತಾ ಇದ್ದನು.

ಹೀಗಿರುವಲ್ಲಿ ಬ್ರಹ್ಮನು ರಾತ್ರಿಯಾದಾಗ ಮಲಗಿ ಕೊಂಡನು. ಆ ವೇಳೆಯನ್ನರಿತು, ಸೋಮಕ ಹಯಗ್ರೀವರೆಂಬ ಹೆಸರುಳ್ಳ ಇಬ್ಬರು ದೈತ್ಯರು ತಾವು ತಾವು ಪರಸ್ಪರವಾಗಿ ಆಲೋಚಿಸಿ ಕೊಂಡದ್ದೇನಂದರೆ—ಈ ಚತುರ್ಮುಖ ಬ್ರಹ್ಮನು ನಿದ್ರೆಯಿಂದ ಎಚ್ಚತ್ತ ಮೇಲೆ, ಈಗ ಜಲ ಪ್ರಳಯದಲ್ಲಿ ಮುಳುಗಿ ಹೋಗಿರುವ ಭೂಲೋಕ, ಭುವರ್ಲೋಕ, ಸುವರ್ಲೋಕಗಳೆಂಬ ಮೂರು ಲೋಕಗಳನ್ನು ತಿರಿಗಿ ಸೃಷ್ಟಿಸುವನು. ಆಗ ಭೂಲೋಕದಲ್ಲಿ ನಡೆಯುವ ದೇವಯಾಗ ಪಿತೃ ಯಾಗಗಳಲ್ಲಿ ಮಾಡಿದ ಹೋಮದ ಹವ್ಯ ಕವ್ಯಗಳಿಂದ ತೃಪ್ತರಾಗಿ, ದೇವತೆಗಳು ನಮಗೆ ಹಗೆಗಳಾಗಿ, ಹೆಚ್ಚಿ, ನಮ್ಮನ್ನು ತಿರಸ್ಕರಿಸುವರು. ಇದಕ್ಕೆಲ್ಲಾ ಮೂಲ ಭೂತವಾದದ್ದು ವೇದ ವಾಕ್ಯಗಳು. ಆದ್ದರಿಂದ ಈಗ ಬ್ರಹ್ಮನು ಮಲಗಿ ಇದ್ದಾನೆ. ಈ ವೇಳೆಯಲ್ಲಿ ಆ ವೇದ ಪುಸ್ತಕಗಳನ್ನು ಕದ್ದು ಕೊಂಡು ಬಂದು ಬಿಟ್ಟರೆ, ನಮಗೆ ಹಗೆಗಳಾದ ದೇವತೆಗಳ ಹುಟ್ಟೇ ನಾಶವಾಗಿ ಹೋಗುವದು ಎಂದು ಯೋಚಿಸಿ, ಸತ್ಯ ಲೋಕಕ್ಕೆ ಹೋಗಿ, ವೇದದ ಪುಸ್ತಕಗಳನ್ನು ಕದ್ದು ಕೊಂಡು ಬಂದು, ಸಮುದ್ರವನ್ನು ಹೊಗಲು; ಅವರನ್ನು ಮತ್ಸ್ಯ ಮೂರ್ತಿಯಾದ ಮಹಾ ವಿಷ್ಣುವು ಕಂಡು, ಆ ಇಬ್ಬರು ದೈತ್ಯರನ್ನು ಸಂಹರಿಸಿ, ವೇದ ಪುಸ್ತಕಗಳನ್ನೆಲ್ಲಾ ತೆಗೆದು ಕೊಂಡು, ತನ್ನಲ್ಲಿ ಇಟ್ಟು ಕೊಂಡಿದ್ದನು.

ಆ ಬಳಿಕ ನೇಮಕವಾದ ರಾತ್ರಿಯು ಕಳೆದು ಬೆಳಗಾದಾಗ, ಚತುರ್ಮುಖ ಬ್ರಹ್ಮನು ಎದ್ದು, ಸ್ನಾನ ಸಂಧ್ಯಾದಿ ನಿತ್ಯ ಕರ್ಮಗಳನ್ನು ನೆರವೇರಿಸಿ ಕೊಂಡು, ಕಮಲಾಸನದಲ್ಲಿ ಕುಳಿತು, ತಿರಿಗಿ ಸೃಷ್ಟಿಯನ್ನು ಮಾಡುವದಕ್ಕೆ ವೇದ ವಾಕ್ಯ ಪುಸ್ತಕಗಳನ್ನು ನೋಡುವಲ್ಲಿ, ಅವುಗಳಿಲ್ಲದೆ ಇರಲು; ಮಹಾ ಚಿಂತಾ ಕ್ರಾಂತನಾಗಿ, ಮಹಾ ವಿಷ್ಣುವನ್ನು ಧ್ಯಾನಾ ಮಾಡಿ,—ಎಲೈ, ಮಹಾ ವಿಷ್ಣುವೇ, ನಿನ್ನ ಅಪ್ಪಣೆಯ ಪ್ರಕಾರ ನಾನು ರಾತ್ರಿಯಲ್ಲಿ ಮಲಗಿ ಇದ್ದೆನು. ವೇದ ಪುಸ್ತಕಗಳು ಏನಾದವೋ? ನಾನರಿಯೆನು. ಈಗ ಅವುಗಳೊಂದೂ ಕಾಣಿಸುವದಿಲ್ಲ. ಇನ್ನು ನಾನು ಹ್ಯಾಗೆ ಸೃಷ್ಟೀ ಮಾಡಲಿ? ನಾನು ಮೈ ಮರೆತು, ಮಲಗಿರುವಾಗ್ಯೆ ಜಗದೀಶ್ವರನಾದ ನೀನು ಜಾಗರೂಕನಾಗಿ ಕಾದು ಇದ್ದು, ನನ್ನನ್ನು ಕಾಪಾಡದೆ ಇದ್ದರೆ, ಮತ್ತೊಬ್ಬರು ಕಾಪಾಡುವರುಂಟೋ? ಮಹಾ ಸ್ವಾಮಿಾ, ನಾನು ಈಗ ಕಣ್ಣಿಲ್ಲದ ಕುರುಡನ ಹಾಗಿದ್ದೇನೆ, ಎಂದು ಮೊರೆ ಇಡಲು; ಮತ್ಸ್ಯ ಮೂರ್ತಿಯಾದ ಮಹಾ ವಿಷ್ಣುವು ಪ್ರತ್ಯಕ್ಷವಾಗಿ ಕಾಣಿಸಿ ಕೊಂಡು, ಹಯಗ್ರೀವ ಸೋಮಕರು ವೇದ ಪುಸ್ತಕವನ್ನು ಕದ್ದು ಕೊಂಡು, ಮಹಾ ಸಮುದ್ರದಲ್ಲಿ ಹೊಕ್ಕದ್ದನ್ನೂ, ಸರ್ವಜ್ಞನಾದ ತಾನು ಮುಂದೆ ಹೀಗಾಗುವದೆಂದು ತಿಳಿದು, ಮೊದಲೇ ಮತ್ಸ್ಯಾವತಾರವನ್ನು ಮಾಡಿ, ಸಮುದ್ರದಲ್ಲಿ ಸಂಚರಿಸುತ್ತಾ ಇದ್ದದ್ದನ್ನೂ, ಆ ದೈತ್ಯರನ್ನು ಕೊಂದು, ವೇದ ಪುಸ್ತಕಗಳನ್ನು ತಿರಿಗಿ ತೆಗೆದು ಕೊಂಡಿರುವದನ್ನೂ ತಿಳಿಸಿ, ವೇದ ಪುಸ್ತಕಗಳನ್ನು ಕೊಟ್ಟು, ಪುನಹ ವೇದಗಳನ್ನು ಉಪದೇಶಿಸಿ, ಅಂತರ್ಧಾನನಾದನು. ಆ ಬಳಿಕ—ಬ್ರಹ್ಮನು ಪೂರ್ವದ ಹಾಗೆ ನಿರ್ಮಿಸಿದನು ಎಂಬ ವೇದ ವಾಕ್ಯ ಪ್ರಕಾರ ಜಲ ಪ್ರಳಯದಲ್ಲಿ ಮುಳುಗಿದ್ದ ಭೂಲೋಕ, ಭುವರ್ಲೋಕ, ಸುವರ್ಲೋಕಗಳನ್ನು ಪೂರ್ವದಂತೆಯೇ ಉಂಟು ಮಾಡಿದನು.

### 76. The Second or Turtle Incarnation
### ೭೬. ಕೂರ್ಮಾವತಾರದ ಕಥೆ.

ಅಮರಾವತೀ ಪಟ್ಟಣದಲ್ಲಿ ದೇವೇಂದ್ರನು ಸುಧರ್ಮೆ ಎಂಬ ಸಭೆಯಲ್ಲಿ ಅಷ್ಟದಿಕ್ಪಾಲಕರೇ ಮೊದಲಾದ ಸಮಸ್ತ ದೇವತೆಗಳೊಡನೆ ಕೂಡಿ, ಒಡ್ಡೋಲಗವನ್ನು ಕೊಡುತ್ತ ಇದ್ದವನು, ತನ್ನ ಪಟ್ಟಣದ ಶೃಂಗಾರವನ್ನು ನೋಡ ಬೇಕೆಂದು ಕುತೂಹಲ ಹುಟ್ಟಿ, ನಾಲ್ಕು ಕೊಂಬುಗಳುಳ್ಳ ಐರಾವತವೆಂಬ ಬಿಳೀ ಆನೆಯನ್ನು ನವ ರತ್ನ ಖಚಿತವಾದ ರೆಂಚೆಗಳಿಂದಲೂ, ರತ್ನದ ಪದಕಗಳಿಂದಲೂ, ಮಣಿ ಮಯವಾದ ಗಗ್ಗರಗಳಿಂದಲೂ, ಕೆಂಬರಲುಗಳಿಂದ ಕೆತ್ತಿದ ಹಿಡಿ

ಗಳುಳ್ಳ ಚೌರಿಗಳಿಂದಲೂ ಶೃಂಗರಿಸಿರುವಂತೆ, ಮೂವುಟಗನಿಗೆ ಕಟ್ಟು ಮಾಡಿದ ಪ್ರಕಾರ ಅಲಂಕರಿಸಿದಂಥ ಐರಾವತದ ಮೇಲೆ ಶಚೀ ದೇವಿಯೊಡನೆ ಕೂಡಿ, ಏರಿ ಕೊಂಡು ಹೊರಡಲು; ಅಗ್ನಿಯು ಟಗರನ್ನೂ, ಯಮನು ಕೋಣವನ್ನೂ, ನಿರುತಿಯು ಮನುಷ್ಯನನ್ನೂ, ವರುಣನು ನೆಗಳನ್ನೂ, ವಾಯುವು ಎರಳೆಯನ್ನೂ, ಕುಬೇರನು ಕುದುರೆಯನ್ನೂ, ಈಶಾನನು ನಂದಿಯನ್ನೂ, ಏರಿ ಕೊಂಡು, ದೇವೇಂದ್ರನ ಎರಡು ಕಡೆಯಲ್ಲಿಯೂ ಸಂಭ್ರಮದಿಂದ ಬಂದರು. ಮತ್ತು ಅಷ್ಟ ವಸುಗಳೂ, ಸಪ್ತ ಮರುತ್ತುಗಳೂ, ಏಕಾದಶ ರುದ್ರರೂ, ದ್ವಾದಶಾದಿತ್ಯರೂ, ತಮ್ಮ ತಮ್ಮ ವಾಹನಗಳನ್ನು ಏರಿ, ವಸ್ತ್ರಾಭರಣ ಭೂಷಿತರಾಗಿ, ದೇವೇಂದ್ರನ ಹಿಂದು ಗಡೆಯಲ್ಲಿ ಬಂದರು.

ಮತ್ತು ಗಂಧರ್ವಾಧಿಪತಿಗಳು ವೀಣೆ, ತಂಬೂರಿ, ಸಿತಾರು, ಸಾರಂಗಿ, ಕಿನ್ನರಿ, ಸ್ವರಮಂಡಲ ಮೊದಲಾದ ತಂತೀ ವಾದ್ಯಗಳನ್ನೂ; ಕೊಳಲು, ಮುಖವೀಣೆ, ಓಲಗ, ರಣ ಕಹಳೆ, ಕೊಂಬು, ತುತ್ತೂರಿ, ಮುಂತಾದ ರಂಧ್ರ ವಾದ್ಯಗಳನ್ನೂ; ಮದ್ದಳೆ, ಭೇರಿ, ಢಕ್ಕೆ, ಡಿಂಡಿಮ, ಮೊದಲಾದ ಚರ್ಮ ವಾದ್ಯಗಳನ್ನೂ; ತಾಳ ಮೊದಲಾದ ಕಾಂಸ್ಯ ವಾದ್ಯಗಳನ್ನೂ ನುಡಿಸುತ್ತ, ಊದುತ್ತ, ಬಾರಿಸುತ್ತ, ಸಾವೇರಿ, ಅಸಾವೇರಿ, ಕಾಂಬೋದಿ, ಯರಕಲಕಾಂಬೋದಿ, ಭೈರವಿ, ಆನಂದಭೈರವಿ, ನೀಲಾಂಬುರಿ, ರೇಗುಪ್ತಿ, ತೋಡಿ, ಮುಂತಾದ ಅನೇಕ ರಾಗಗಳಿಂದ ಸಂಗೀತವನ್ನು ಹಾಡುತ್ತ, ದೇವೇಂದ್ರನ ಮುಂಗಡೆಯಲ್ಲಿ ಬಂದರು. ಮತ್ತು ಅಪ್ಸರ ಸ್ತ್ರೀಯರು ಇಂದ್ರನ ಪುರೋ ಭಾಗದಲ್ಲಿ ಸಾಲಾಗಿ ಎದಿರು ಬದಿರಿಗೆ ನಿಂತು, ಭರತ ಶಾಸ್ತ್ರದಲ್ಲಿ ಹೇಳಿರುವ ಮೇರೆಗೆ ನರ್ತನಮಾಡಿದರು. ಕಿನ್ನರ, ಕಿಂಪುರುಷಾದಿಗಳು—ಜಂಭಾರಿಯೇ, ಪಾಕಶಾಸನನೇ, ವೃತ್ರಾಸುರ ಸಂಹಾರಕನೇ, ತ್ರಿಲೋಕದೊಡೆಯನೇ, ಜಯ ಜಯಾ ಎಂದು ಹೊಗಳುತ್ತಾ ಬಂದರು. ಇಷ್ಟು ಸಂಭ್ರದಿಂದ ಕೂಡಿ, ದೇವೇಂದ್ರನು ಅಮರಾವತಿಯ ರಾಜಬೀದಿಯಲ್ಲಿ ಬರುತ್ತ, ದೇವ ಸ್ತ್ರೀಯರು ಬಂದು, ಬಂದು, ನವ ರತ್ನದಾರತಿಗಳನ್ನು ಬೆಳಗಿದರೆ, ಅವರಿಗೆ ಅನೇಕ ವಸ್ತ್ರಾಭರಣಗಳನ್ನು ಕೊಡುತ್ತ, ಮಹದೈಶ್ವರ್ಯದಿಂದ ಮದೋನ್ಮತ್ತನಾಗಿ, ತನಗೆ ಯಾರೂ ಸರಿ ಇಲ್ಲವೆಂದು, ಮನಸ್ಸಿನಲ್ಲಿ ಎಣಿಸಿ ಕೊಂಡು, ಬಹಳ ಹೆಮ್ಮೆಯಿಂದ ಬರುತ್ತಾ ಇದ್ದನು.

ಅಷ್ಟರಲ್ಲಿಯೇ ದೂರ್ವಾಸನೆಂಬ ಕೋಪ ಸ್ವಭಾವವುಳ್ಳ ಉಗ್ರ ತಪಸ್ವಿಯು ಕೈಲಾಸ ಪರ್ವತಕ್ಕೆ ಹೋಗಿ, ಪಾರ್ವತೀ ಪರಮೇಶ್ವರರನ್ನು ವಂದಿಸಿ, ಬಹಳವಾಗಿ ಸ್ತೋತ್ರ ಮಾಡಲು; ಪ್ರಸನ್ನಳಾಗಿ, ಪಾರ್ವತಿಯು ತಾನು ಧರಿಸಿದ್ದ ಪುಷ್ಪ

ಮಾಲಿಕೆಯನ್ನು ಅನುಗ್ರಹಾ ಮಾಡಿ ಕೊಟ್ಟದರಿಂದ, ಅದನ್ನು ತೆಗೆದು ಕೊಂಡು, ಅಮರಾವತಿಗೆ ಬಂದು, ರಾಜ ಬೀದಿಯಲ್ಲಿ ಹೋಗುವ ದೇವೇಂದ್ರನಿಗೆ ಹರಸಿ ಕೊಟ್ಟನು. ಆ ದೇವೇಂದ್ರನು ಐಶ್ವರ್ಯ ಮತ್ತನಾಗಿ, ಆ ಮುನಿಯನ್ನು ವಿನಯದಿಂದ ಮನ್ನಿಸದೆ, ಅವನು ಕೊಟ್ಟ ಪುಷ್ಪ ಮಾಲಿಕೆಯನ್ನು ತಾನು ತಲೆಯಲ್ಲಿ ಧರಿಸದೆ, ಐರಾವತದ ಕುಂಭ ಸ್ಥಳದ ಮೇಲೆ ಹಾಕಲು; ಅದು ತನ್ನ ಸುಂಡಿಲಿನಿಂದ ತೆಗೆದು, ಭೂಮಿಯಲ್ಲಿ ಬಡಿದು, ಕಾಲಿನಲ್ಲಿ ತುಳಿದು ಬಿಟ್ಟಿತು. ಅದನ್ನು ಕಂಡು, ಈ ದೂರ್ವಾಸ ಮುನಿಯು ಕೋಪಿಸಿ ಕೊಂಡು, ಕಣ್ಣುಗಳಿಂದ ಕಿಡಿಗಳನ್ನು ಉದುರಿಸುತ್ತ, ಇಂದ್ರನನ್ನು ಕುರಿತು—ಎಲೈ, ಮದಾಂಧನೇ, ಮಹಾದೇವಿಯ ಪ್ರಸಾದವನ್ನು—ನೀನು ತ್ರಿಲೋಕಾಧಿಪತಿಯು; ಹೆಚ್ಚಾಗಿ ಬಾಳುತ್ತಿರ ಬೇಕೆಂದು ನಿನ್ನಲ್ಲಿ ನಾನು ಅನುಗ್ರಹವನ್ನು ಮಾಡಿ ತಂದು ಕೊಟ್ಟರೆ, ಆ ಪ್ರಸಾದವನ್ನು ವಿನಯದಿಂದ ನಿನ್ನ ಶಿರಸ್ಸಿನಲ್ಲಿ ಧರಿಸದೆ, ಐರಾವತದ ಕುಂಭ ಸ್ಥಳದಲ್ಲಿ ಯಾವ ತ್ರಿಲೋಕಾಧಿಪತ್ಯದ ಐಶ್ವರ್ಯ ಮದದಿಂದ ಹಾಕಿದೆಯೋ, ಆ ನಿನ್ನ ಐಶ್ವರ್ಯವನ್ನು ನಿನ್ನ ಹಗೆಗಳಾದ ದೈತ್ಯರು ಕಿತ್ತು ಕೊಳ್ಳಲಿ ಎಂದು, ಶಾಪವನ್ನು ಕೊಟ್ಟನು. ಆಗ ದೇವೇಂದ್ರನು—ಕೆಟ್ಟ ಮೇಲೆ ಬುದ್ಧಿ ಬಂತು; ಅಟ್ಟ ಮೇಲೆ ಒಲೆ ಉರಿಯಿತು, ಎಂಬ ಗಾದೆಗೆ ಸರಿಯಾಗಿ ಬುದ್ಧಿ ತಿಳಿದು, ಬೇಗ ಐರಾವತದಿಂದ ಕೆಳಕ್ಕೆ ಧುಮುಕಿ, ಆ ದೂರ್ವಾಸ ಮುನಿಗಳ ಎರಡು ಕಾಲುಗಳ ಮೇಲೆ ಬಿದ್ದು—ನಾನು ಮಹಾ ಅಪರಾಧಿಯು. ನನ್ನ ಅಪರಾಧವನ್ನು ಮನ್ನಿಸಿ, ವಿಶಾಪವನ್ನು ಕೊಟ್ಟು, ಉದ್ಧಾರಾ ಮಾಡ ಬೇಕೆಂದು ಅಂಗಲಾಚಿ ಕೊಂಡು, ಬಹಳವಾಗಿ ಬೇಡಿ ಕೊಂಡದರಿಂದ, ಕರುಣ ಹುಟ್ಟಿ, ದೂರ್ವಾಸ ಮುನಿಯು—ಕೆಲವು ಕಾಲದ ಮೇಲೆ ಲಕ್ಷ್ಮೀಪತಿಯಾದ ಮಹಾ ವಿಷ್ಣುವು ಯಥಾ ಪ್ರಕಾರ ನಿನಗೆ ತ್ರಿಲೋಕಾಧಿಪತ್ಯ ಉಂಟಾಗುವಂತೆ ಮಾಡುವನು ಎಂದು ವಿಶಾಪವನ್ನು ಕೊಟ್ಟು, ಹೊರಟು ಹೋದನು. ಆ ಬಳಿಕ, ದೇವೇಂದ್ರನು ಕೊಬ್ಬು ಅಡಗಿ, ಚಿಂತಾಕ್ರಾಂತನಾಗಿ, ಮೋರೆಗೆ ಮುಸುಗು ಹಾಕಿ ಕೊಂಡು, ಅರಮನೆಗೆ ಹೋಗಿ, ಏಕಾಂತ ಸ್ಥಳದಲ್ಲಿ ಬಿದ್ದು ಕೊಂಡನು.

ಹೀಗಿರುವಲ್ಲಿ, ರಸಾತಲದಿಂದ ನಮುಚಿ, ಬಲಿ, ಮೊದಲಾದ ದೈತ್ಯೇಂದ್ರರು ಕಳುಹಿಸಿ ಇದ್ದ ಗೂಢಚಾರರು ಈ ಸುದ್ದಿಯನ್ನು ತಿಳಿದು, ರಸಾತಲಕ್ಕೆ ಹೋಗಿ, ಆ ದೈತ್ಯೇಂದ್ರರಿಗೆ ಅರಿಕೆ ಮಾಡಿದರು. ಆಗ ಬಲಿಯು ಏಕಾಂತದಲ್ಲಿ ತಮ್ಮ ಗುರುಗಳಾದ ಶುಕ್ರಾಚಾರ್ಯರನ್ನೂ ತನ್ನ ಜೊತೆಯ ದೈತ್ಯ ರಾಜರನ್ನೂ ಕೂಡಿಸಿ ಕೊಂಡು,—ನಾವು ಮುಂದೆ ಮಾಡುವ ಕಾರ್ಯವೇನು? ಎಂದು ಕೇಳಿ

ದನು. ಅದಕ್ಕೆ ಶುಕ್ರಾಚಾರ್ಯನು–ಎಲೈ, ದೈತ್ಯ ರಾಜನೇ–ಎಷ್ಟೊ ಬಂದಾಗ್ಯೆ ಕಣ್ಣು ಮುಚ್ಚಿ ಕೊಂಡನು ಎಂಬಂತೆ ಮಾಡದೆ, ಇಂಥಾ ವೇಳೆಯಲ್ಲಿ ನೀವು ಚತುರಂಗ ಬಲ ಸಮೇತರಾಗಿ ದೇವ ಲೋಕಕ್ಕೆ ಹೋಗಿ, ದೇವೇಂದ್ರನನ್ನು ಯುದ್ಧದಲ್ಲಿ ಸದೆ ಬಡಿದು, ಅವನ ಪದವಿಯನ್ನು ಕೆಳ ಕೊಂಡು, ಸುಖ ಪಡದೆ ಇದ್ದಲ್ಲಿ, ನಿಮ್ಮಂಥಾ ಹೇಡಿಗಳು ಜಗತ್ತಿನಲ್ಲಿ ಇನ್ಯಾರುಂಟು? ಲೋಕದಲ್ಲಿ ರಾಜ ನೀತಿಯನ್ನು ತಿಳಿದಂಥ ಧೊರೆಗಳು ಗೂಢ ಚಾರರನ್ನು ಹಗೆಗಳ ಪಟ್ಟಣಕ್ಕೆ ನಾನಾ ವೇಷಗಳನ್ನು ಹಾಕಿಸಿ, ಕಳುಹಿಸಿ, ಹಗೆಗಳ ಪಟ್ಟಣದಲ್ಲಿ ಅನ್ಯಾಯಗಳು ನಡೆಯುವಂಥಾದ್ದನ್ನೂ; ಅರಸು, ಮಂತ್ರಿ, ದಳವಾಯಿ, ಮುಂತಾದವರಿಗೆ ಪರಸ್ಪರವಾಗಿ ಮನಸ್ತಾಪಗಳು ಹುಟ್ಟಿರುವದನ್ನೂ; ಅರಸುಗಳಿಗೆ ಜ್ಞಾತಿ ವರ್ಗದಲ್ಲಿ ಒಬ್ಬರೊಬ್ಬರಿಗೆ ವೈಷಮ್ಯ ಹುಟ್ಟಿರುವದನ್ನೂ; ಅರಸು ತನ್ನ ರಾಜ್ಯದಲ್ಲಿ ದುಷ್ಟರಿಗೆ ಶಿಕ್ಷೆಯನ್ನೂ; ಶಿಷ್ಟರಿಗೆ ರಕ್ಷಣೆಯನ್ನೂ ಮಾಡದೆ, ದುಷ್ಟರಿಗೆ ಮನ್ನಣೆಯನ್ನೂ, ಶಿಷ್ಟರಿಗೆ ಅವಮನ್ನಣೆಯನ್ನೂ ಮಾಡುವದನ್ನೂ; ತನ್ನ ಕೈ ಕೆಳಗಿನ ಉದ್ಯೋಗಸ್ಥರಿಗೆ ಕ್ಲಿಪ್ತ ಪ್ರಕಾರ ತಿಂಗಳು ತಿಂಗಳಿಗೂ ಸಂಬಳಗಳನ್ನು ಸಲ್ಲಿಸುತ್ತಾ ಬಾರದೆ ಇರುವದನ್ನೂ; ರಾಜ್ಯದಲ್ಲಿ ಪ್ರಜೆಗಳು ವ್ಯಾಧಿ, ವಿಷ್ಣೂರ, ಬರ, ಮುಂತಾದವುಗಳಿಂದ ಕ್ಷೋಭೆ ಪಡುವದನ್ನೂ; ತಿಳಿದು ಕೊಂಡು, ಅಂಥಾ ವೇಳೆಯಲ್ಲಿ ಒಂದು ಕ್ಷಣವಾದರೂ ತಾಮಸ ಮಾಡದೆ, ದಂಡೆತ್ತಿ, ಹೋಗಿ, ಹಗೆಗಳನ್ನು ಜೈಸಿ, ಅವರ ದೇಶ ಕೋಶಗಳನ್ನು ಸ್ವಾಧೀನಾ ಮಾಡಿ ಕೊಳ್ಳುವರು, ಎಂದು ಹೇಳಲು; ದೈತ್ಯ ರಾಜರೆಲ್ಲರು–ಆಚಾರ್ಯರು ಹೇಳಿದಂತೆಯೇ ನಡೆಯು ಬೇಕೆಂದು, ಒಮ್ಮನಸ್ಸಾಗಿ ದೇವೇಂದ್ರನ ಮೇಲೆ ಯುದ್ಧಕ್ಕೆ ಹೋಗ ಬೇಕೆಂದು ಸನ್ನದ ರಾಗುತ್ತಾ ಇದ್ದರು.

ದೇವ ಗುರುವಾದ ಬೃಹಸ್ಪತ್ಯಾಚಾರ್ಯರು ದೈತ್ಯರ ಪಟ್ಟಣಗಳಿಗೆ ಕಳುಹಿಸಿದ್ದ ಬೇವಿನವರು ಇವರ ಸಮುಕಟ್ಟನ್ನು ತಿಳಿದು, ಬೇಗನೆ ಬೃಹಸ್ಪತ್ಯಾಚಾರ್ಯರ ಬಳಿಗೆ ಹೋಗಿ, ಗುಟ್ಟಾಗಿ ತಿಳಿಸಿದರು. ಅವರು ಬಹಳ ವ್ಯಾಕುಲ ಚಿತ್ತರಾಗಿ, ದೇವೇಂದ್ರಾದಿ ಅಷ್ಟದಿಕ್ಪಾಲಕರನ್ನು ಏಕಾಂತದಲ್ಲಿ ಕೂರಿಸಿ ಕೊಂಡು,–ಮಹಾ ಮುನಿಯಾದ ದೂರ್ವಾಸರ ಶಾಪದಿಂದ ನಮಗೆ ಪರಾಜಯವಾಗುವದು ಸಿದ್ಧವು. ಈಗ ವ್ಯರ್ಥವಾಗಿ ಆ ದೈತ್ಯರೊಡನೆ ಹುಯ್ಲಲ್ಲಿ ಹೋರಿ, ಹತರಾಗುವದಕ್ಕಿಂತ ಎಲ್ಲರು ಸ್ವರ್ಗ ಲೋಕವನ್ನು ಬಿಟ್ಟು, ಹೆಂಡರು, ಮಕ್ಕಳು, ಬಂಧು ಬಳಗಗಳೊಡನೆ ಕೂಡಿ, ಎಲ್ಲಿಯಾದರೂ, ಒಂದು ಗುಪ್ತವಾದ ಪುಣ್ಯಾಶ್ರಮದಲ್ಲಿ ಕೆಲವು ಕಾಲ ಇದ್ದು ಕೊಂಡು, ಮಹಾ ವಿಷ್ಣುವನ್ನು ಆರಾಧಿಸುತ್ತ ಇದ್ದು,

ಸಮಯ ಬಂದಾಗ್ಯೆ ಹಗೆಗಳಾದ ದುಷ್ಟ ದೈತ್ಯರನ್ನು ಗೆದ್ದು, ನಮ್ಮ ದೇವ
ಲೋಕವನ್ನು ಸಾಧಿಸುವಂಥಾದ್ದು ನನ್ನ ಬುದ್ಧಿಗೆ ಯುಕ್ತವಾಗಿ ತೋರುತ್ತದೆ
ಎಂದು ಹೇಳಲು; ಆ ಮಾತಿಗೆ ಅವರೆಲ್ಲಾ ಒಡಂಬಟ್ಟದರಿಂದ,—ನೀವೆಲ್ಲರು ಜಾ
ಗ್ರತೆಯಾಗಿ ಹೊರಟು ಹೋಗಿ, ನೈಮಿಶಾರಣ್ಯವೆಂಬ ಪುಣ್ಯ ಕ್ಷೇತ್ರದಲ್ಲಿ ಇರ್ರಿ.
ನಾನು ಶುಕ್ರಾಚಾರ್ಯರನ್ನೂ ದೈತ್ಯ ರಾಜರನ್ನೂ ಕಂಡು, ಕೂಡಲೆ ನಿಮ್ಮ
ಬಳಿಗೆ ಬರುವೆನು ಎಂದು ಹೇಳಿ, ಅವರನ್ನೆಲ್ಲಾ ಕಳುಹಿಸಿ ಬಿಟ್ಟು, ತಾನು ಜಾ
ಗ್ರತೆಯಾಗಿ ದೈತ್ಯ ರಾಜರ ಬಳಿಗೆ ರಸಾತಲಕ್ಕೆ ಬಂದನು. ಆಗ ಅವರೆಲ್ಲರು
ಇವರಿಗೆ ವಂದಿಸಿ, ಉಪಚಾರಗಳನ್ನೆಲ್ಲಾ ಮಾಡಿ, ರಹಸ್ಯ ಸ್ಥಳದಲ್ಲಿ ಕೂರಿಸಿ
ಕೊಂಡು,—ಮತ್ತೇನು ತಾವು ದಯ ಮಾಡಿದ್ದು? ನಿಮ್ಮ ಮುಖವನ್ನು ನೋಡಿ
ದರೆ, ಬಹಳ ದುಗುಡದಿಂದ ಇರುವ ಹಾಗೆ ಕಾಣುತ್ತದೆಂದು ಕೇಳಲು; ಸುರು
ಗುರುವು—ಎಲೈ, ದೈತ್ಯೇಂದ್ರರುಗಳಿರಾ, ನಾನು ಈಗ ಹೇಳುವ ಮಾತುಗಳ
ನ್ನೆಲ್ಲಾ ನೀವು ಸಾವಧಾನದಿಂದ ಕೇಳಿ, ಮಹಾ ಬುದ್ಧಿ ಶಾಲಿಗಳಾದ ಶುಕ್ರಾಚಾ
ರ್ಯರೊಡನೆ ಆಲೋಚಿಸಿ, ನಾನು ಹೇಳಿದಂಥಾದ್ದು ಯುಕ್ತವಾಗಿದ್ದರೆ, ಆ ಪ್ರ
ಕಾರ ನಡೆಯ ಬಹುದು. ಆ ಮಾತುಗಳು ಏನಂದರೆ,—ಈ ದೇವೇಂದ್ರನು,
ಬಾರಿ ಬಾರಿಗೂ, ಎಷ್ಟು ವಿಧವಾಗಿ ನೀತಿಗಳನ್ನು ನಾನು ಉಪದೇಶಾ ಮಾಡು
ತ್ತಾ ಬಂದಾಗ್ಯೂ, ತನ್ನ ಶಿರಿಯ ಹೆಮ್ಮೆಯಿಂದ ಅದನ್ನು ಕೇಳದೆ, ಮಹಾ ಋಷಿ
ಗಳಿಗೆ ಅವಮಾನವನ್ನು ಮಾಡುವದೂ, ಅನ್ಯಾಯದಿಂದ ನಡೆಯುವದೂ, ಹೀಗೆ
ಮಾಡುತ್ತ ಬಂದದರಿಂದ, ಪದೆ ಪದೆ ಅವನಿಗೆ ಹಾನಿಗಳು ತಟ್ಟುತ್ತಾ ಇರುವವು.
ಹಾಗೆ ತಟ್ಟದಾಗ್ಯೂ, ವಿಷ್ಣುವು ಅವನಿಗೆ ಸಹಾಯಕನಾದ್ದರಿಂದ, ಅವುಗಳನ್ನೆಲ್ಲಾ
ಪರಿಹರಿಸುತ್ತ, ತಿರಿಗಿ ತ್ರಿ ಲೋಕಾಧಿಪತ್ಯವನ್ನು ಶೇರಿಸುತ್ತ ಬಂದನು. ಈಗ
ಅವನ ಕೊಬ್ಬಿನಿಂದ ದೂರ್ವಾಸ ಮುನಿಯ ಶಾಪವು ಅವನಿಗೆ ಪ್ರಾಪ್ತವಾಗಿ,
ಸಕಲ ದೇವತೆಗಳೊಡನೆ ಕೂಡಿ, ಓಡಿ ಹೋಗಿದ್ಧಾನೆ. ನಿಮಗೆ ತ್ರಿ ಲೋಕಾಧಿ
ಪತ್ಯವು ಸ್ವಾಧೀನವಾಗುತ್ತೆ. ಆದರೂ, ಕೆಲವು ದಿವಸದ ಮೇಲೆ ನಿಮ್ಮನ್ನು
ಜೈಸಿ, ವಿಷ್ಣುವು ತಿರಿಗಿ ಅವನಿಗೆ ಶೇರಿಸುವನು. ಇದನ್ನು ನಾನು ಯೋಚಿಸಿ,
ಈ ದುಷ್ಟನಾದ ಇಂದ್ರನ ಸಹವಾಸವು ನನಗೆ ತಪ್ಪುವ ಹಾಗೆ ಮಾಡುವದಕ್ಕೆ
ನಿಮಗೆ ಶಾಶ್ವಿತವಾಗಿ ತ್ರಿಲೋಕಾಧಿಪತ್ಯವು ನಿಲ್ಲುವಂತೆ ಮಾಡಿ, ನಾನೂ ಶುಕ್ರಾ
ಚಾರ್ಯರೂ ಏಕಾಲೋಚನೆಯಿಂದ ಸುಖವಾಗಿರ ಬೇಕೆಂದು ನಿಮ್ಮ ಬಳಿಗೆ
ಬಂದೆನು, ಅಂದನು.

ಆಗ ಶುಕ್ರಾಚಾರ್ಯರೂ ದೈತ್ಯ ರಾಜರೂ ಆಲೋಚಿಸಿ,—ನೀವು ಹೇಳಿ

ದ್ದೆಲ್ಲಾ ನಿಜವೇ ಸರಿ! ಒಂದು ಮಾತಾದರೂ ಸುಳ್ಳಲ್ಲ. ನೀವು ಇಂದ್ರನನ್ನು ಬಿಟ್ಟು, ನಮಗೆ ಸಹಾಯವಾದರೆ, ಎಂದಿಗೂ ತ್ರಿ ಲೋಕಾಧಿಪತ್ಯವು ನಮ್ಮ ನ್ನು ಬಿಟ್ಟು ತೊಲಗುವದಿಲ್ಲವೆಂದು ಖಂಡಿತವಾಗಿ ತಿಳಿದು ಇದ್ದೇವೆ. ತಾವು ನಮಗೆ ಸ್ಥಿರವಾಗುವ ಹಾಗೆ ಮಾಡಿದಲ್ಲಿ, ನಿಮ್ಮ ಆಜ್ಞೆಯನ್ನು ಸ್ವಲ್ಪವಾದರೂ ಮೀರದೆ, ನಡೆದು ಕೊಳ್ಳುವೆವೆಂದು ಬಿನ್ನವಿಸಿದರು. ಆಗ ಬೃಹಸ್ಪತಿಯು ಅವರನ್ನು ಕುರಿತು—ಎಲೈ, ದೈತ್ಯ ರಾಜರುಗಳಿರಾ, ನೀವು ಹಾಗೆ ನಡೆಯುವಂಥಾವರೇ ಸರಿ. ಈ ವಿಷಯದಲ್ಲಿ ನನಗೆ ಬಹಳ ನಂಬಿಗೆ ಉಂಟು. ಆದರೆ ನಾನು ಯೋಚಿಸಿರುವ ಕೆಲಸವು ಮಹಾ ದುರ್ಘಟವಾಗಿರುವದು. ಆ ಕೆಲಸಕ್ಕೆ ವಿಷ್ಣುವು ಸಹಾಯವಾಗದಿದ್ದರೆ, ನಡೆಯಲಾರದು. ಆದ್ದರಿಂದ ನಾನು ಮೊದಲಿನ ಹಾಗೆಯೇ ಆ ದೇವತೆಗಳಲ್ಲಿಯೇ ಸೇರಿ ಕೊಂಡು, ಅದರ ಸಂವಿಧಾನಗಳೆಲ್ಲಾ ಮಾಡಿ, ಕೈ ಗೂಡಿದರೆ, ತಿರಿಗಿ ಬಂದು, ನಿಮ್ಮನ್ನು ಕಂಡು, ಏಕಾಂತದಲ್ಲಿ ತಿಳಿಸುತ್ತೇನೆ. ಈಗ ಸದ್ಯಕ್ಕೆ ನೀವು ಸರ್ವರು ಮಹಾತ್ಮರಾದ ಶುಕ್ರಾಚಾರ್ಯರನ್ನು ಕರೆದು ಕೊಂಡು, ದೇವತೆಗಳು ಬಿಟ್ಟು ಹೋಗಿರುವ ಸ್ವರ್ಗಕ್ಕೆ ಹೋಗಿ—ತ್ರಿಲೋಕಾಧಿಪತ್ಯವನ್ನು ಆಳಿ ಕೊಂಡು ಇರ್ರಿ, ಎಂದು ಹೇಳಿ, ಅವರನ್ನೆಲ್ಲಾ ಅಮರಾವತೀ ಪಟ್ಟಣಕ್ಕೆ ಕಳುಹಿಸಿ ಬಿಟ್ಟು, ತಾನು ಅವರ ಅಪ್ಪಣೆಯನ್ನು ತೆಗೆದು ಕೊಂಡು, ಅಲ್ಲಿಂದ ಹೊರಟು, ಮಹಾ ವಿಷ್ಣುವಿನ ಬಳಿಗೆ ಬಂದು, ದೇವೇಂದ್ರನಿಗೆ ದೂರ್ವಾಸರ ಶಾಪ ಬಂದದ್ದನ್ನೂ ತಾನು ದೇವತೆಗಳನ್ನು ನೈಮಿಶಾರಣ್ಯಕ್ಕೆ ಕಳುಹಿಸಿ, ದೈತ್ಯರ ಬಳಿಗೆ ಹೋಗಿ, ಮಾಡಿರುವ ತಂತ್ರವನ್ನೂ ತಿಳಿಸಿ,—ನೀನು ಮಹಾತ್ಮನು. ಯಥಾ ಪ್ರಕಾರವಾಗಿ ದೇವತೆಗಳಿಗೆ ಸ್ವರ್ಗವು ಸೇರುವದಕ್ಕೆ ಏನು ಉಪಾಯವನ್ನು ಹೇಳುತ್ತೀಯೋ, ಆ ಪ್ರಕಾರ ನಡೆಯುವೆನು, ಅಂದನು.

ಆ ಮಾತನ್ನು ಕೇಳಿ, ಮಹಾ ವಿಷ್ಣುವು ಮುಗುಳು ನಗೇ ನಕ್ಕು, ಸುರ ಗುರುವನ್ನು ನೋಡಿ,—ನೀನು ಮಹಾ ಬುದ್ಧಿವಂತನು; ಒಳ್ಳೇ ಯೋಚನೆಯನ್ನು ಮಾಡಿದೆ. ನಿನ್ನಂಥಾ ಗುರುವು ದೇವೇಂದ್ರನಿಗೆ ಇರುವಲ್ಲಿ, ಅವನಿಗೆ ಯಾವ ಕೆಲಸ ತಾನೆ ಅಸಾಧ್ಯವು? ಎಂದು, ಬಹಳವಾಗಿ ಹೊಗಳಿದನು. ಅದನ್ನು ಕೇಳಿ, ಸುರ ಗುರುವು—ಎಲೈ, ಸ್ವಾಮಿಯೇ, ಸಕಲ ಲೋಕದಲ್ಲಿರುವ ಪ್ರಾಣಿಗಳು ಬೊಂಬೆಗಳು, ನೀನು ಸೂತ್ರಧಾರನು. ನೀನು ಕುಣಿಸಿದ ಹಾಗೆ ಕುಣಿಯುವವು. ಭಕ್ತನಾದ ನನ್ನ ಹೃದಯದಲ್ಲಿ ಇದ್ದು ಕೊಂಡು, ನೀನು ಪ್ರೇರಿಸಿದ ಹಾಗೆ ನಾನು ಮಾಡಿದೆನೇ ಹೊರ್ತು, ನನ್ನ ಬುದ್ಧಿ ಎಷ್ಟರದು? ನಾನು ಎಷ್ಟ

ರವನು? ನೀನು ಉಬ್ಬಿಸಿ, ನನ್ನನ್ನು ಕೊಂಡಾಡಿ, ನಾಚಿಕೆ ಪಡಿಸ ಬೇಡ. ಮುಂದೆ ಮಾಡುವ ಕೇಲಸಕ್ಕೆ ಅಪ್ಪಣೇ ಕೊಡು ಎಂದು ಬೇಡಿ ಕೊಂಡನು.

ಮಹಾ ವಿಷ್ಣುವು—ಎಲೈ, ಸುರಾಚಾರ್ಯನೇ, ನನ್ನ ಕ್ಷೀರ ಸಮುದ್ರವನ್ನು ಮಂದರ ಪರ್ವತದಿಂದ ಕಡೆದರೆ, ಈ ಕಡಲಲ್ಲಿ ಅಮೃತವು ಹುಟ್ಟುವದು. ಆ ಅಮೃತವನ್ನು ದೇವತೆಗಳು ಕುಡಿದರೆ, ಜರಾ ಮರಣ ರಹಿತರಾಗಿ, ತ್ರಿಲೋಕಾಧಿಪತ್ಯವನ್ನು ಹೊಂದಿ, ತಿರಿಗಿ ಆಳುವರು. ಇದು ಮಹಾ ಅಸಾಧ್ಯವಾದ ಕೆಲಸವು. ದೇವತೆಗಳಿಂದ ಮಾತ್ರವೇ ಸಾಗದು. ನೀನು ಏನಾದರೂ ಈಗ ಮಾಡಿರುವ ತಂತ್ರವನ್ನೇ ತಳಹದಿ ಮಾಡಿ ಕೊಂಡು, ದೇವತೆಗಳಿಗೂ ದೈತ್ಯರಿಗೂ ಸಂಧಿಯನ್ನು ಮಾಡಿ, ಇಬ್ಬರನ್ನು ಕೂಡಿಸಿದರೆ, ಈ ಕೆಲಸ ಸಾಗೀತು ಎಂದು, ಹೇಳಿ ಕಳುಹಿಸಿದನು. ಸುರ ಗುರುವು ಆ ಮಾತನ್ನು ಕೇಳಿ, ವಿಷ್ಣುವಿಗೆ ನಮಸ್ಕರಿಸಿ,—ನಿನ್ನ ಕೃಪೆಯಿಂದ ನೀನು ಹೇಳಿದ ಹಾಗೆಯೇ ಮಾಡುವೆನೆಂದು ಅಪ್ಪಣೆಯನ್ನು ತೆಗೆದು ಕೊಂಡು, ಅಲ್ಲಿಂದ ಹೊರಟು, ನೈಮಿಶಾರಣ್ಯಕ್ಕೆ ಬಂದು, ದೇವೇಂದ್ರನಿಗೆ ಏಕಾಂತದಲ್ಲಿ ತಾನು ಮಾಡಿರುವ ತಂತ್ರಾಲೋಚನೆಗಳನ್ನೆಲ್ಲಾ ತಿಳಿಸಿ, ಅಲ್ಲಿಂದ ಸ್ವರ್ಗ ಲೋಕವನ್ನು ಕುರಿತು ಹೊರಟನು.

ಅಷ್ಟರಲ್ಲಿ ದೈತ್ಯ ರಾಜರು ಸ್ವರ್ಗ ಲೋಕದಲ್ಲಿ ಇದ್ದು ಕೊಂಡು, ತ್ರಿಲೋಕಾಧಿಪತ್ಯವನ್ನು ಆಳುತ್ತ, ತಮ್ಮ ಗುರುವಾದ ಶುಕ್ರಾಚಾರ್ಯರೊಡನೆ—ಸುರರ ಗುರುವಾದ ಬೃಹಸ್ಪತ್ಯಾಚಾರ್ಯರು ನಮ್ಮಲ್ಲಿ ಹೇಳಿ, ಹೋಗಿ, ಬಹಳ ದಿವಸವಾಯಿತು; ಇನ್ನೂ ಬರಲಿಲ್ಲ. ನಮ್ಮ ಬಳಿಗೆ ಬಂದು, ಸುಳ್ಳು ಮಾತುಗಳನ್ನು ಹೇಳಿ, ನಮ್ಮನ್ನು ಪುಸಲಾಯಿಸಿ ಹೋದ ಹಾಗೆ ಕಾಣುತ್ತದೆ ಎಂದು ಹೇಳಲು; ಶುಕ್ರಾಚಾರ್ಯರು,—ಅವರು ಹಾಗೆ ಸುಳ್ಳು ಹೇಳ ತಕ್ಕವರಲ್ಲ. ಏನೋ ಮಹಾ ಕಾರ್ಯಪ್ರಯತ್ನದಿಂದ ಸ್ವಲ್ಪ ಸಾವಕಾಶವಾಗಿರ ಬಹುದು. ನೀವು ಇಷ್ಟು ಮಾತ್ರಕ್ಕೆ ಚಪಲ ಚಿತ್ತರಾಗಿ ಬೇರೆ ಆಲೋಚನೆಯನ್ನು ಮಾಡ ಬಾರದು. ಯಾವ ಮನುಷ್ಯನು ಚಂಚಲ ಚಿತ್ತನಾಗದೆ, ಸ್ಥಿರ ಚಿತ್ತನಾಗಿರುವನೋ, ಅವನಿಗೆ ತಾನು ಎಣಿಸಿದ ಕೆಲಸಗಳೆಲ್ಲಾ ಕೈ ಗೂಡುವವು ಎಂದು ಹೇಳುತ್ತ, ಇದ್ದರು.

ಆ ವೇಳೆಗೆ ಸರಿಯಾಗಿ ಬೃಹಸ್ಪತ್ಯಾಚಾರ್ಯರು ಅರಮನೆಯ ಬಾಗಲಲ್ಲಿ ನಿಂತು—ನಾನು ಬಂದಿರುವ ಸುದ್ದಿಯನ್ನು ದೈತ್ಯ ರಾಜರಿಗೆ ಬೇಗೆ ತಿಳಿಸು ಎಂದು ಬಾಗಲ ಕಾಯುವವನಿಗೆ ಹೇಳಲು; ಅವನು ಹೋಗಿ, ಬಿನ್ನವಿಸಿದ ಕ್ಷಣವೇ,

ಅವರೆಲ್ಲರು—ಆಚಾರ್ಯರು ಹೇಳಿದ ಮಾತು ಯುಕ್ತವೆಂದು ನಿಶ್ಚೈಸಿ ಕೊಂಡು, ಶುಕ್ರಾಚಾರ್ಯರನ್ನು ಸಂಗಡ ಕರೆದು ಕೊಂಡು, ಎದುರಾಗಿ ಬಂದು, ಬೃಹಸ್ಪತ್ಯಾಚಾರ್ಯರಿಗೆ ಅಭಿವಂದಿಸಿ, ಕೈ ಹಿಡಿದು, ಏಕಾಂತ ಸ್ಥಳಕ್ಕೆ ಕರೆದು ಕೊಂಡು ಹೋಗಿ, ಪೀಠದಲ್ಲಿ ಕುಳ್ಳಿರಿಸಿ, ಮನ್ನಣೆಯನ್ನು ಮಾಡಿ, ಅವರ ಅಪ್ಪಣೆಯಿಂದ ತಾವು ತಮ್ಮ ತಮ್ಮ ಉಚಿತ ಸ್ಥಾನಗಳಲ್ಲಿ ಕುಳಿತು ಕೊಂಡರು. ಆ ಬಳಿಕ ಸುರಾಚಾರ್ಯನು ನಗೆ ಮೊಗದಿಂದ ದೈತ್ಯರನ್ನು ಕುರಿತು—ನೀವು ಬಹಳ ಧರ್ಮಿಷ್ಠರಾದ್ದರಿಂದ, ನಿಮ್ಮ ಕೆಲಸವು ಕೈ ಗೂಡುವ ಹಾಗೆ ದೇವರು ಮಾಡಿದ್ದಾನೆ. ದೇವತೆಗಳಿಗೆ ಸಹಾಯವಾಗಿ ಮಹಾ ವಿಷ್ಣುವು—ಮಂದರ ಪರ್ವತದಿಂದ ತನ್ನ ಕ್ಷೀರ ಸಮುದ್ರವನ್ನು ಕಡೆದರೆ, ಅದರಲ್ಲಿ ನಿಮಗೆ ಬೇಕಾದ ಅನರ್ಘ್ಯವಾದ ವಸ್ತುಗಳೂ, ಅಮೃತವೂ ಹುಟ್ಟುವವು. ಆ ಅಮೃತವನ್ನು ನೀವು ಕುಡಿದರೆ, ಅಮರ್ತ್ಯರಾಗಿ, ತಿರಿಗಿ ದೈತ್ಯರನ್ನು ಜೈಸಿ, ನಿಮ್ಮ ಸ್ವರ್ಗವನ್ನು ಹೊಂದುವಿರಿ ಎಂದು, ಅಪ್ಪಣೇ ಕೊಡಲು; ಅಲ್ಲಿಂದ ಈಚೆಗೆ ಬಂದ ದೇವತೆಗಳನ್ನು ಕುರಿತು ನಾನು—ಎಲೈ, ದೇವತೆಗಳಿರಾ, ನೀವು ಅಲ್ಪ ಬಲರು. ಮೇರು ಪರ್ವತಕ್ಕೆ ಸಮಾನವಾದ ಮಂದರ ಪರ್ವತವನ್ನು ಕಿತ್ತು, ಹೊತ್ತು ಕೊಂಡು ಬರುವದಕ್ಕೆ ಶಕ್ತಿ ಸಾಲದು. ಇದಕ್ಕೆ ಒಂದು ಒಳ್ಳೇ ಯೋಚನೆಯು ನನ್ನ ಮನಸ್ಸಿಗೆ ತೋರಿ ಇದೆ. ಅದೇನಂದರೆ, ನೀವೂ ದೈತ್ಯರೂ ಒಬ್ಬ ತಂದೆಯ ಮಕ್ಕಳು. ಅವರಿಗೆ ನೀವು ದ್ವೇಷಿಗಳಾಗಿರುವದರಿಂದ ಪದೆ ಪದೆ ನಿಮಗೆ ಇಂಥಾ ತೊಂದರೆಗಳು ಸಂಭವಿಸುತ್ತವೆ. ಲೋಕದಲ್ಲಿ ಸ್ವ ಜನ ವಿರೋಧವು ಬಹಳ ಕೆಟ್ಟದ್ದು. ಅದರಿಂದ ದುಃಖ ಪ್ರಾಪ್ತಿಯೇ ಹೊರತು, ಎಳ್ಳಷ್ಟೂ ಸುಖವಿಲ್ಲ. ಆದ್ದರಿಂದ ನೀವೂ ಅವರೂ ಕೂಡಿದರೆ, ಎಂಥಾ ಅಸಾಧ್ಯ ಕೆಲಸವಾದರೂ ಸಾಗುವದು. ಆ ಮೇಲೆ ಇತ್ತಂಡದವರು ಅಮೃತ ಪಾನವನ್ನು ಮಾಡಿ, ಸುಖವಾಗಿ ಸಹೃದಯರಾಗಿರ ಬಹುದು ಎಂದು ಹೇಳಿದೆನು. ಅದಕ್ಕೆ ಅವರೆಲ್ಲರು ನನ್ನನ್ನು ಕುರಿತು—ತಾವೇ ದೈತ್ಯರಿಗೂ ನಮಗೂ ಸಂಧೀ ಮಾಡಿಸ ಬೇಕೇ ಹೊರ್ತು, ಇನ್ನೊಬ್ಬರಿಂದಲೂ ಈ ಕೆಲಸ ತೀರಲಾರದು ಎಂದು, ಬಹಳವಾಗಿ ಬೇಡಿ ಕೊಂಡದರಿಂದ, ನಾನು—ನನ್ನ ಮನಸ್ಸಿನಲ್ಲಿ ಮಾಡಿದ ಯೋಚನೆಯು ಕೈ ಗೂಡುವದೆಂದು ಸಂತೋಷ ಪಟ್ಟು, ಅವರ ಮಾತಿನ ಮೇಲೆ ನಿಮ್ಮ ಬಳಿಗೆ ಬಂದವನ ಹಾಗೆ ನಿಮ್ಮ ಬಳಿಗೆ ಬಂದೆನು, ಅಂದನು.

ಅದನ್ನು ಕೇಳಿ, ಶುಕ್ರಾಚಾರ್ಯರೂ ದೈತ್ಯರೂ ಬೃಹಸ್ಪತ್ಯಾಚಾರ್ಯರ ಯುಕ್ತಿಯನ್ನು ಬಹಳವಾಗಿ ಕೊಂಡಾಡಿ,—ಮುಂದೆ, ನಾವು ನಡೆಯ ತಕ್ಕ ಬಗ್ಯೆ

ಬುದ್ಧಿ ಕಲಿಸ ಬೇಕೆಂದು ಬೇಡಿ ಕೊಂಡರು. ಅದಕ್ಕೆ ಬೃಹಸ್ಪತ್ಯಾಚಾರ್ಯರು—ನೀವು ಇತ್ತಂಡದವರು ಕೂಡಿ, ಕಡಲನ್ನು ಕಡೆಯುವಲ್ಲಿ, ಅಮೃತ ಒಂದು ವಿನಹ, ಉಳಿದ ಭೋಗ್ಯ ವಸ್ತುಗಳು ಏನೇನು ಹುಟ್ಟಿದಾಗ್ಯೂ, ಅವುಗಳನ್ನೆಲ್ಲಾ ನೀವು ಮುಟ್ಟದೆ, ದೇವತೆಗಳಿಗೆ ಬಿಟ್ಟು ಬಿಟ್ಟು, ಅಮೃತ ಒಂದನ್ನು ಮಾತ್ರ ನೀವು ತೆಗೆದು ಕೊಂಡು ಕುಡಿದರೆ, ನೀವೇ ಅಮರ್ತ್ಯರಾಗುವಿರಿ; ನೋಡುವವರಿಗೆ ನ್ಯಾಯಕ್ಕೂ ಸರಿಯಾಗಿರುವದು, ಎಂದು ಹೇಳಲು; ಆ ಮಾತನ್ನು ಕೇಳಿ, ದೈತ್ಯರೆಲ್ಲರು—ಈ ಸುರಾಚಾರ್ಯರು ನಮ್ಮ ಶ್ರೇಯಸ್ಸನ್ನೇ ಕೋರಿ ಕೊಂಡಿದ್ದಾರೇ ಹೊರ್ತು, ದೇವತೆಗಳಲ್ಲಿ ಎಷ್ಟು ಮಾತ್ರವೂ ಪ್ರೇಮವಿಲ್ಲವೆಂದು, ತಮ್ಮ ಮನಸ್ಸಿನಲ್ಲಿ ತಿಳಿದು ಕೊಂಡು, ಸುರ ಗುರುಗಳನ್ನು ಕುರಿತು—ಮುಂದೆ ಏನು ಮಾಡುತ್ತೀರಿ? ಎಂದು ಕೇಳಲು;—ನಾನು ಹೋಗಿ, ಇಂದ್ರಾದಿಗಳನ್ನೆಲ್ಲಾ ಮಂದರ ಪರ್ವತದ ತೊಪ್ಪಲಲ್ಲಿ ನಿಲ್ಲಿಸಿ, ಬಂದು, ನಿಮ್ಮನ್ನು ಅಲ್ಲಿಗೆ ಕರೆದು ಕೊಂಡು ಹೋಗುವೆನೆಂದು ಹೇಳಿ, ತಿರಿಗಿ ಮಹಾ ವಿಷ್ಣುವಿನ ಬಳಿಗೆ ಬಂದು, ತಾನು ದೈತ್ಯರಲ್ಲಿ ಹೇಳಿದ ಮಾತುಗಳನ್ನೆಲ್ಲಾ ತಿಳಿಸಿ,—ಕಡೆಗೆ ಅಮೃತವು ಅವರಿಗೆ ಶೇರದೆ, ದೇವತೆಗಳಿಗೆ ಶೇರುವ ಹಾಗೆ ಮಾಡುವ ಭಾರ ನಿನ್ನ ಕೂಡಿ ಇದೆ ಎಂದು ಹೇಳಲು; ವಿಷ್ಣುವು—ಹಾಗೆ ಮಾಡುವೆನೆಂದು ನಂಬಿಗೆಯನ್ನು ಕೊಟ್ಟು, ಕಳುಹಿಸಿದನು.

ಬೃಹಸ್ಪತ್ಯಾಚಾರ್ಯರು ದೇವೇಂದ್ರಾದಿಗಳನ್ನೆಲ್ಲಾ ಮಂದರ ಪರ್ವತದ ಬಳಿಗೆ ಕರೆದು ಕೊಂಡು ಬಂದು, ನಿಲ್ಲಿಸಿ, ದೈತ್ಯ ರಾಜರ ಬಳಿಗೆ ಹೋಗಿ, ಶುಕ್ರಾಚಾರ್ಯರು ಸಹಿತವಾಗಿ ಅವರನ್ನೆಲ್ಲಾ ಕರೆದು ಕೊಂಡು, ದೇವತೆಗಳ ಬಳಿಗೆ ಬಂದು, ಇಬ್ಬರಿಗೂ ಸಂಧೀ ಮಾಡಿ, ಸ್ನೇಹವನ್ನು ಮಾಡಿಸಿದನು. ಆ ಮೇಲೆ ಸುರಾಸುರರು, ದೈತ್ಯ ದಾನವರು, ಯಕ್ಷ, ಗರುಡ, ಗಂಧರ್ವ, ಕಿಂಪುರುಷೋರಗ, ಮುಂತಾದವರೆಲ್ಲಾ ಕೂಡಿ, ಮಂದರ ಪರ್ವತವನ್ನು ಎಷ್ಟು ಬಲದಿಂದ ಕಿತ್ತಾಗ್ಯೂ, ಅಲ್ಲಾಡದೆ ಇದ್ದ ಕಾರಣ, ದೇವಾಸುರರೆಲ್ಲರು ಮಹಾ ವಿಷ್ಣುವಿಗೆ ನಮಸ್ಕರಿಸಿ, ಪ್ರಾರ್ಥನೆಯನ್ನು ಮಾಡಿ ಕೊಳ್ಳಲು; ವಿಷ್ಣುವು ಅನಂತನೆಂಬ ಮಹಾ ಶೇಷನನ್ನು ಕರದು—ನೀನು ಹೋಗಿ, ಮಂದರ ಪರ್ವತವನ್ನು ಕಿತ್ತು, ಇಟ್ಟು ಬಾ ಎಂದು ಹೇಳಿ ಕಳುಹಿಸಲು; ಆತನು ಮಹಾ ಬಲಿಷ್ಠನಾದ್ದರಿಂದ, ನಿಮಿಷ ಮಾತ್ರದಲ್ಲಿ ಕಿತ್ತು ಬಿಟ್ಟನು. ಆ ಮೇಲೆ ಸುರಾಸುರರೆಲ್ಲಾ ಕೂಡಿ, ಆ ಪರ್ವತವನ್ನು ತಲೆಯ ಮೇಲೆ ಹೊತ್ತು ಕೊಂಡು ಬಂದು, ಕ್ಷೀರ ಸಮುದ್ರದಲ್ಲಿ ಹಾಕಲು; ಅದು ಕಡಲಲ್ಲಿ ಮುಳುಗಿ ಹೋಯಿತು. ಆಗ ದೇವಾಸುರರೆಲ್ಲರು—ರಾತ್ರೆಯಲ್ಲಾ ಶ್ರಮಪಟ್ಟು,—ಹೆತ್ತ ಕೂಸನ್ನು ನಾಯಿ ಎತ್ತಿ ಕೊಂಡು ಹೋಯಿತು ಎಂಬ ಗಾದೆಗೆ

ಸರಿಯಾಗಿ ನಮ್ಮ ಶ್ರಮವೆಲ್ಲಾ ವ್ಯರ್ಥವಾಗಿ ಹೋಯಿತು, ಎಂದು ಚಿಂತೆ ಪಟ್ಟು—ಭಕ್ತ ಪರಾಧೀನನಾದ ಲಕ್ಷ್ಮೀ ಪತಿಯೇ, ನೀನೇ ನಮ್ಮ ಕಷ್ಟವನ್ನು ಸಾಫಲ್ಯಾ ಮಾಡಿ, ನಾವು ಈಗ ಯೋಚಿಸಿರುವ ಕಾರ್ಯವು ಕೈ ಗೂಡುವಂತೆ, ನಮ್ಮ ಮೇಲೆ ಕನಿಕರವಿಟ್ಟು, ಮಾಡಿಸ ಬೇಕೆಂದು, ಬಹಳವಾಗಿ ಪ್ರಾರ್ಥಿಸಿ ಕೊಂಡದರಿಂದ, ಮಹಾ ವಿಷ್ಣುವು ಅವರಿಗೆ ಪ್ರತ್ಯಕ್ಷನಾಗಿ,—ಎಲೈ, ದೇವಾಸುರರುಗಳಿರಾ, ನಾನು ಮಹಾ ಕೂರ್ಮಾವತಾರವನ್ನು ಮಾಡಿ, ಸಮುದ್ರದಲ್ಲಿ ಮುಳುಗಿರುವ ಈ ಮಂದರ ಪರ್ವತವನ್ನು ಎತ್ತಿ, ನನ್ನ ಬೆನ್ನಿನ ಮೇಲೆ ಸಮುದ್ರದ ನಡು ನೀರಿನಲ್ಲಿ ಹೊತ್ತು ಕೊಂಡಿರುವೆನು; ನಿಮ್ಮ ಸಂತೋಷವಿದ್ದ ಹಾಗೆ ಕಡೆಯಿರಿ, ಎಂದು ಹೇಳಿ, ಅದೃಶ್ಯನಾಗಿ, ಮಹಾ ಕೂರ್ಮಾವತಾರವನ್ನು ಮಾಡಿ, ತನ್ನ ಬೆನ್ನಿನಿಂದ ಎತ್ತಿ, ಪರ್ವತವನ್ನು ಧರಿಸಿ ಕೊಂಡನು.

ಆಗ ನೀರಿನ ಮೇಲೆ ನಿಂತಿರುವ ಮಂದರ ಪರ್ವತವನ್ನು ದೇವಾಸುರರು ನೋಡಿ, ಮಹಾ ವಿಷ್ಣುವಿನ ಮಹಿಮೆಗೆ ಬಹಳ ಆಶ್ಚರ್ಯ ಪಟ್ಟು, ಆತನನ್ನು ಅನೇಕ ವಿಧವಾಗಿ ಸ್ತುತಿಸಿ, ಸಮುದ್ರವನ್ನು ಕಡೆಯುತ್ತಿರಲು; ಅದರಿಂದ ಮೊದಲು ಹುಟ್ಟಿದ ವಿಷವನ್ನು ಶಿವನು ಪಾನಾ ಮಾಡಿ, ಆ ಹಿಂದೆ ಹುಟ್ಟಿದ ಚಂದ್ರ ಕಳೆಯನ್ನು ಆಭರಣವಾಗಿ ಧರಿಸಿ ಕೊಂಡನು. ತರುವಾಯ ಹುಟ್ಟಿದ ಲಕ್ಷ್ಮಿಯನ್ನೂ ಕೌಸ್ತುಭ ರತ್ನವನ್ನೂ ಮಹಾ ವಿಷ್ಣುವು ಅಂಗೀಕರಿಸಿದನು. ಆ ಬಳಿಕ ಹುಟ್ಟಿದ ಅಪ್ಸರ ಸ್ತ್ರೀಯರೂ, ಕಲ್ಪ ವೃಕ್ಷವೂ, ಕಾಮ ಧೇನುವೂ, ಚಿಂತಾಮಣಿಯೂ, ವಾರುಣಿ ಎಂಬ ಮದ್ಯವೂ, ಉಚ್ಚೈಶ್ರವಸ್ಸೆಂಬ ಕುದುರೆಯೂ, ಮುಂತಾದ್ದನ್ನೆಲ್ಲಾ ದೇವೇಂದ್ರನು ತೆಗೆದು ಕೊಂಡನು. ಆ ಮೇಲೆ ಧನ್ವಂತ್ರಿ ಎಂಬ ಒಬ್ಬ ತೇಜಃ ಪುರುಷನು ಅಕ್ಷಯವಾದ ಅಮೃತ ಕಲಶವನ್ನು ಕೈಯಲ್ಲಿ ತೆಗೆದು ಕೊಂಡು, ಸಮುದ್ರದಿಂದ ಮೇಲಕ್ಕೆ ಬರಲು; ಆತನನ್ನು ಕಂಡು, ಬೃಹಸ್ಪತ್ಯಾಚಾರ್ಯನು ದೈತ್ಯರಿಗೆ ಕಣ್ಣಿನಿಂದ ಸಂಜ್ಞೋ ಮಾಡಲು; ದೈತ್ಯರಾಜರು ಆ ಸೂಚನೆಯನ್ನು ತಿಳಿದು, ಆ ಧನ್ವಂತ್ರಿಯ ಕೈಯಿಂದ ಅಮೃತ ಕಲಶವನ್ನು ಕಿತ್ತು ಕೊಂಡರು. ಅದನ್ನು ಕಂಡು, ದೇವತೆಗಳೆಲ್ಲಾ ಬಹಳ ಘಾಬರಿಯಾಗಿ, ಮಹಾ ವಿಷ್ಣುವನ್ನು ಕುರಿತು—ಎಲೈ, ಆಪದ್ರಕ್ಷನೇ, ನಮಗಿನ್ನೇನು ಗತಿ? ಈ ವೇಳೆಯಲ್ಲಿ ನೀನು ಉದ್ಧಾರಾ ಮಾಡದೆ ಇದ್ದರೆ, ನಾವು ವ್ಯರ್ಥವಾಗಿ ಕೆಟ್ಟು ಹೋಗುತ್ತೇವೆ ಎಂದು, ಬಹಳವಾಗಿ ಸ್ತುತಿಸಿದ್ದರಿಂದ, ಕರುಣಾಳುವಾದ ವಿಷ್ಣುವು ಮೋಹಿನೀ ಅವತಾರವನ್ನು ತಾಳಿ, ದೈತ್ಯರನ್ನು ವಂಚಿಸಿ, ಅವರ ಕೈಯಿಂದ ಅಮೃತ ಕಲಶವನ್ನು ತೆಗೆದು ಕೊಂಡು, ದೇವತೆಗಳಿಗೆಲ್ಲಾ ಕುಡಿಸಿ, ಧನ್ವಂತ್ರಿಯನ್ನೂ

ಅಮೃತ ಕಲಶವನ್ನೂ ದೇವೇಂದ್ರನ ವಶಕ್ಕೆ ಕೊಟ್ಟು, ಅದೃಶ್ಯವಾಗಿ ಹೋದನು. ದೈತ್ಯರೆಲ್ಲಾ—ಮೋಸ ಹೋದೆವೆಂದು ಯೋಚಿಸಿ ಕೊಂಡು, ತಿರಿಗಿ ದೇವತೆಗಳ ಕಡೆಯಿಂದ ಕಿತ್ತು ಕೊಳ್ಳ ಬೇಕೆಂದು ಯುದ್ಧಕ್ಕೆ ಉದ್ಯುಕ್ತರಾಗಲು; ದೇವೇಂದ್ರಾದಿ ದೇವತೆಗಳು ಅಮೃತ ಪಾನದ ಬಲದಿಂದ ದೈತ್ಯರನ್ನೆಲ್ಲಾ ಜೈಸಿದ್ದರಿಂದ, ಅವರೆಲ್ಲರು ರಸಾತಲಕ್ಕೆ ಓಡಿ ಹೋದರು. ಆ ಬಳಿಕ ದೇವತೆಗಳೆಲ್ಲರು ಮಹಾ ವಿಷ್ಣುವನ್ನು ಕಂಡು, ನಮಸ್ಕರಿಸಿ, ಸ್ವರ್ಗ ಲೋಕಕ್ಕೆ ಬಂದು, ದೇವೇಂದ್ರನಿಗೆ ತಿರಿಗಿ ತ್ರಿಲೋಕಾಧಿಪತ್ಯಕ್ಕೆ ಅಭಿಷೇಕವನ್ನು ಮಾಡಿ, ಸುಖವಾಗಿದ್ದರು.

### 77. The Third or Boar Incarnation.

### ೭೭. ವರಾಹಾವತಾರದ ಕಥೆ

ಚತುರ್ಮುಖ ಬ್ರಹ್ಮನ ಮಾನಸ ಪುತ್ರನಾದ ಕಶ್ಯಪ ಪ್ರಜಾಪತಿಯ ಹೆಂಡತಿಯಾದ ದಿತಿಯ ಬಸುರಿನಲ್ಲಿ, ವೈಕುಂಠ ಲೋಕದ ದ್ವಾರ ಪಾಲಕರಾದ ಜಯ ವಿಜಯರು ಸನಕ ಸನಂದನರೆಂಬ ಮುನಿಗಳ ಶಾಪದಿಂದ ಅವಳ ಮಕ್ಕಳಾಗಿ ಹುಟ್ಟಲು; ಬ್ರಹ್ಮ ದೇವನು ಅವರ ಬಳಿಗೆ ಬಂದು, ಹಿರೀ ಹುಡುಗನಿಗೆ ಹಿರಣ್ಯಕಶಿಪುವೆಂದೂ, ಕಿರಿಯವನಿಗೆ ಹಿರಣ್ಯಾಕ್ಷನೆಂದೂ, ಹೆಸರನ್ನಿಟ್ಟು, ಅವರಿಗೆ ಬೇಕಾದ ಒಡವೆ ವಸ್ತು ಆಭರಣಾದಿಗಳನ್ನು ಕೊಟ್ಟು, ಹರಸಿ, ಹೊರಟು ಹೋದನು. ಆ ಮೇಲೆ ಅವರಿಬ್ಬರು ಅದ್ಭುತಾಕಾರರಾಗಿ ಬೆಳೆದು, ಮಹಾ ಪರಾಕ್ರಮ ಶಾಲಿಗಳಾಗಿ, ದಿಗ್ವಿಜಯಗಳನ್ನು ಮಾಡಿ, ಸಕಲ ಧರಣೀ ಮಂಡಲವನ್ನು ತಮ್ಮ ಸ್ವಾಧೀನಾ ಮಾಡಿ ಕೊಂಡು, ಶೋಣಿತ ಪುರವೆಂಬ ಪಟ್ಟಣದಲ್ಲಿ ಅತಿ ಸಂಭ್ರಮದಿಂದ ಇದ್ದು ಕೊಂಡು, ರಾಜ್ಯ ಭಾರವನ್ನು ಮಾಡುತ್ತಾ ಇದ್ದರು. ಅವರ ರಾಜ್ಯದಲ್ಲಿ ದೇವೇಂದ್ರನು ಅವರಿಗೆ ಹೆದರಿ ಕೊಂಡು, ಕಾಲ ಕಾಲದಲ್ಲಿ ಮಳೆಗಳನ್ನು ಕರೆಯುತ್ತ ಬಂದದರಿಂದ, ಗದ್ದೆ, ಹೊಲ, ತೋಟ ಮುಂತಾದ ಪೈರುಗಳಾಗುವ ಭೂಮಿಗಳೆಲ್ಲಾ ಪೈರು ಪಚ್ಚೆಗಳಿಂದ ಸದಾ ಕಾಲವು ತುಂಬಿ ಇದ್ದ ಕಾರಣ, ಸರ್ವ ಪ್ರಜೆಗಳು ಸುಭಿಕ್ಷದಿಂದ ಸುಖವಾಗಿ ಸಕಲ ಐಶ್ವರ್ಯ ಸಂಪನ್ನರಾಗಿದ್ದರು. ಯಮನು ಆ ದೈತ್ಯರ ಭಯದಿಂದ, ಅವರಾಳುವ ದೇಶದಲ್ಲಿ ಅಕಾಲದಲ್ಲಿ ಸಾವು ಉಂಟಾಗದಂತೆ ಕಾದು ಕೊಂಡು, ಜಾಗರೂಕನಾಗಿರುವನು. ಮತ್ತು ಅವರ ರಾಜ್ಯದಲ್ಲಿ ಒಬ್ಬನಾದರೂ ದರಿದ್ರನಿಲ್ಲ.

ಹೀಗೆ ಏಕ ಛತ್ರಾಧೀಶ್ವರರಾಗಿ, ರಾಜ್ಯವನ್ನಾಳುತ್ತಾ ಇರುವಲ್ಲಿ, ನಾರದ ಮುನೀಶ್ವರನು—ಅವರ ಐಶ್ವರ್ಯವನ್ನು ನೋಡ ಬೇಕೆಂದು, ಬರಲು; ಆ ಹಿರಣ್ಯಾಕ್ಷ ಹಿರಣ್ಯಕಶಿಪುಗಳು ಬಂದ ನಾರದನನ್ನು ಮನ್ನಿಸಿ, ತಮ್ಮ ಸಮೀಪದಲ್ಲಿ

ಚಿನ್ನದ ಕಾಲು ಮಣೆಯ ಮೇಲೆ ಕುಳ್ಳಿರಿಸಿ,—ಎಲೈ, ಮುನಿಯೇ, ನೀನು ಮೂರು ಲೋಕಗಳನ್ನು ತಿರುಗುತ್ತೀಯಲ್ಲ? ಹಿಂದೆಯಾಗಲಿ, ಈಗಲಾಗಲಿ, ನಮ್ಮ ಹಾಗೆ ಸಕಲ ಸಂಪತ್ತಿನಿಂದ ರಾಜ್ಯ ಭಾರವನ್ನು ಮಾಡಿದ್ದವರೂ ಮಾಡುತ್ತಿರುವವರೂ ಉಂಟೇ? ಎಂದು ಕೇಳಿದ್ದಕ್ಕೆ, ಆ ಮುನಿಯು—ನಿಮ್ಮ ಹಾಗೆ ರಾಜ್ಯ ಭಾರವನ್ನು ಮಾಡುತ್ತ ಇದ್ದವರೂ ಇರುತ್ತಿರುವವರೂ ಮೂರು ಲೋಕದಲ್ಲಿಯೂ ಯಾರೂ ಇಲ್ಲ, ಎಂದು ಹೇಳಿದನು. ಆ ಮಾತಿಗೆ—ಹಾಗಾದರೆ, ಮುಂದೆಯಾದರೂ ನಮ್ಮ ಹಾಗೆ ರಾಜ್ಯ ಭಾರಾ ಮಾಡುವವರು ಯಾರಾದರೂ ಹುಟ್ಟುವರೋ? ಎಂದು ಕೇಳಲು; ಆ ಮುನಿಯು—ನಿಮ್ಮ ವಂಶದಲ್ಲಿ ಬಲಿ ಚಕ್ರವರ್ತಿ ಎಂಬವನು ನಿಮಗಿಂತ ಅತಿಶಯವಾಗಿ ಈ ಧರಣಿಯನ್ನು ಆಳುವನು. ವಿಷ್ಣುವು ಮೋಸವನ್ನು ಮಾಡಿ, ಅವನ ಕೈಯಿಂದ ಭೂಮಿಯನ್ನು ಕಿತ್ತು ಕೊಳ್ಳುವನು ಎಂದು ಹೇಳಿದನು. ಆ ಮಾತನ್ನು ಕೇಳಿದ ಕ್ಷಣವೇ, ಕಿರಿಯವನಾದ ಹಿರಣ್ಯಾಕ್ಷನೆಂಬವನು ಕೋಪದಿಂದ ಕಣ್ಣುಗಳಲ್ಲಿ ಕಿಡಿಗಳನ್ನು ಉದುರಿಸುತ್ತ, ನಾವೂ ನಮ್ಮ ವಂಶದವರೂ ಆಳುವ ಧರಣಿಯನ್ನು ನಮ್ಮ ಕಡೆಯಿಂದ ಕಳೆದು ಕೊಳ್ಳುವದಕ್ಕೆ ವಿಷ್ಣು ಎಷ್ಟರವನು? ಈ ನಮ್ಮ ಧರಣಿಯು ಅವನ ಕೈಗೆ ಶಿಕ್ಕದಂತೆ ಮಾಡ ಬೇಕು ಎಂದು, ಆ ಕ್ಷಣವೇ ಎದ್ದು, ಭೂಮಿಯನ್ನು ಚಾಪೆಯ ಹಾಗೆ ಸುತ್ತಿ ಕೊಂಡು, ಕಂಕುಳಲ್ಲಿ ಇಟ್ಟುಕೊಂಡು, ಸಮುದ್ರದೊಳಗೆ ಹೊಕ್ಕು, ರಸಾತಲದಲ್ಲಿ ತೆಗೆದು ಕೊಂಡು ಹೋಗಿ, ಇಟ್ಟು, ತನ್ನ ಮೈ ಗೊಬ್ಬಿನಿಂದ ದೇವತೆಗಳನ್ನು ಜೈಸ ಬೇಕೆಂದು, ಗದಾದಂಡವನ್ನು ಧರಿಸಿ ಕೊಂಡು, ಹೊರಟು ಹೋದನು.

ಅಷ್ಟರಲ್ಲಿಯೇ ಸಕಲ ದೇವತೆಗಳೂ ಮುನಿ ಜನಗಳೂ ಕೂಡಿ, ಬ್ರಹ್ಮದೇವರ ಬಳಿಗೆ ಹೋಗಿ, ಆತನನ್ನು ಕರೆದು ಕೊಂಡು, ಕ್ಷೀರ ಸಮುದ್ರಕ್ಕೆ ಹೋಗಿ, ಶ್ರೀ ಮಹಾ ವಿಷ್ಣುವನ್ನು ಕಂಡು, ನಮಸ್ಕರಿಸಿ, ಸ್ತೋತ್ರವನ್ನು ಮಾಡಿ,—ಎಲೈ, ಜಗನ್ನಾಥನೇ, ದುಷ್ಟನಾದ ಹಿರಣ್ಯಾಕ್ಷನೆಂಬ ದೈತ್ಯನು ಭೂಮಿಯನ್ನು ತೆಗೆದು ಕೊಂಡು ಹೋಗಿ, ರಸಾತಲದಲ್ಲಿ ಹಾಕಿದ್ದರಿಂದ, ದೇವ ಯಜ್ಞ, ಪಿತೃಯಜ್ಞ ಮೊದಲಾದದ್ದು ಒಂದೂ ನಡೆಯದೆ, ನಾವೆಲ್ಲರು ಮೃತ ಪ್ರಾಯರಾಗಿದ್ದೇವೆ. ನೀನು ಕರುಣಿಸಿ, ಆ ದೈತ್ಯನನ್ನು ಕೊಂದು, ಭೂಮಿಯನ್ನು ರಸಾತಲದಿಂದ ಮೇಲಕ್ಕೆ ಎತ್ತಿ ಇಟ್ಟು, ನಮ್ಮನ್ನು ಕಾಪಾಡ ಬೇಕೆಂದು, ಬೇಡಿ ಕೊಂಡದರಿಂದ,—ಒಳ್ಳೇದೆಂದು, ಅವನಿಗೆ ಅಭಯವನ್ನಿತ್ತು, ಅವರವರ ಲೋಕಕ್ಕೆ ಕಳುಹಿಸಿ ಬಿಟ್ಟನು.

ಹೀಗಿರುವಲ್ಲಿ, ಒಂದು ದಿವಸ ಸತ್ಯ ಲೋಕದಲ್ಲಿ ಬ್ರಹ್ಮ ದೇವನು—ಎಂದಿಗೆ ಪುರುಷೋತ್ತಮನು ಈ ಭೂಮಿಯನ್ನು ಯಥಾ ಪ್ರಕಾರಕ್ಕೆ ರಸಾತಲದಿಂದ ಮೇಲಕ್ಕೆ ಎತ್ತಿ, ಹವ್ಯ ಕವ್ಯಗಳು ನಡೆಯುವ ಹಾಗೆ ಮಾಡುವನೋ? ಎಂದು ಚಿಂತಿಸುತ್ತ, ಆತನನ್ನು ಧ್ಯಾನಿಸುತ್ತಿರುವಲ್ಲಿ, ಆತನ ಮೂಗಿನ ಸೊಳ್ಳೆಯ ದೆಸೆಯಿಂದ ಅಂಗುಷ್ಟ ಮಾತ್ರಕ್ಕೆ ಒಂದು ವರಾಹನು ಕೆಳಗೆ ಬಿದ್ದು, ಒಡನೆ ಗಗನವನ್ನು ಮುಟ್ಟುವ ಹಾಗೆ ರೌದ್ರಾಕಾರನಾಗಿ ಬೆಳೆದು, ಎಂಟು ದಿಕ್ಕುಗಳು ಒಡೆಯುವ ಹಾಗೆ ಘರ್ಜಿಸಿದನು. ಆ ವರಾಹನಿಗೆ ನಾಲ್ಕು ವೇದಗಳು ನಾಲ್ಕು ಕಾಲುಗಳಾದವು. ವಾಸುಕಿಯು ಬಾಲವಾದನು. ಸ್ಮೃತಿ ಪುರಾಣಗಳೆರಡೂ ಕಿವಿಗಳಾದವು. ಸೂರ್ಯ ಚಂದ್ರರು ಕಣ್ಣುಗಳಾದರು. ಯಜ್ಞಗಳು ಕೋರೆ ದಾಡೆಗಳಾದವು. ಸಕಲ ಮಂತ್ರಗಳು ಸರ್ವಾಂಗಗಳಾದವು. ಇಂಥ ಅದ್ಭುತಾಕಾರಿಯಾದ ವರಾಹನನ್ನು ಕಂಡು, ಬ್ರಹ್ಮ ದೇವನು—ಸ್ವಾಮೀ, ನಿನ್ನಾರ್ಭಟೆಯನ್ನು ನೋಡಿ, ಯಾವವನು ಸಹಿಸ್ಯಾನು? ನೀನು ಕೃಪೆ ಮಾಡಿ, ಭೂಮಿಯನ್ನು ತಂದು, ಆ ಕೇಡಿಗನನ್ನು ಕೊಂದು, ಲೋಕವನ್ನು ಉದ್ಧರಿಸು, ಎಂದು ಬೇಡಿ ಕೊಳ್ಳಲು; ಒಡನೆ ವರಾಹನು ಘುಡಿ ಘುಡಿಸುತ್ತ, ದಾಡೆಯನ್ನು ಮಸೆದು, ಎಡಬಲಗಳನ್ನು ನೋಡಿ, ಮೂಗಿನ ಸೊಳ್ಳೆಗಳಲ್ಲಿ ಕಿಡಿಗಳನ್ನು ಉದುರಿಸುತ್ತ, ಬಾಲವನ್ನು ಆಕಾಶಕ್ಕೆ ಎತ್ತಿ, ರೋಮವನ್ನು ಕೆದರಿ ಕೊಂಡು, ಪಾತಾಳವನ್ನು ಹೊಕ್ಕು, ಅಲ್ಲಿ ಬಿದ್ದಿರುವ ಧರಣಿಯನ್ನು ಕೋರ ದಾಡೆಗಳಿಂದ ಮೇಲಕ್ಕೆ ಎತ್ತಿ, ತರುತ್ತಿದ್ದನು.

ಇತ್ತಲು, ಅಷ್ಟರಲ್ಲಿಯೇ ಪ್ರಾಯದ ಕೊಬ್ಬಿನಿಂದ ಬಲಿಷ್ಠರಾದ ದೇವತೆಗಳನ್ನು ಜೈಸುವದಕ್ಕೆ ಹೊರಟಿದ್ದ ಹಿರಣ್ಯಾಕ್ಷನು ಬಲದ ಉಬ್ಬಿನಲ್ಲಿ ಕಂಡ ಕಂಡವರನ್ನು ಕಾಳಗಕ್ಕೆ ಕರೆದು, ಕರೆದು, ಎದುರಾದವರನ್ನು ಧೂಳೀಪಟಾ ಮಾಡುತ್ತ, ಬರುತ್ತಿರುವಲ್ಲಿ, ಒಬ್ಬರೂ ಅವನ ಕಣ್ಣಿಗೆ ಎದುರಾಗದೆ, ಕದ್ದು, ಓಡಿ ಹೋಗುತ್ತಾ ಇದ್ದರು. ಆ ಹಿರಣ್ಯಾಕ್ಷನು ತನ್ನೊಡನೆ ನಿಂತು ಕಾದುವವರು ಯಾರೂ ಇಲ್ಲದೆ ಇರಲು; ಬಲಿಷ್ಠರಾದವರನ್ನು ಹುಡುಕುತ್ತ ಬಂದು, ಅಮರಾವತೀ ಪಟ್ಟಣವನ್ನು ಹೊಗಲು; ಅವನನ್ನು ಕಂಡು, ದೇವತೆಗಳೆಲ್ಲಾ ದಿಕ್ಕು ದಿಕ್ಕಿಗೆ ಚೆಲ್ಲಿ ಹೋದರು. ಆಗ ದೈತ್ಯನು ದೇವೇಂದ್ರನ ಬಳಿಗೆ ಬಂದು, ಅವನನ್ನು ಕುರಿತು—ಎಲೈ, ಸುರಾಧಿಪನೇ, ನೀನಷ್ಟೆ ಈ ದೇವತೆಗಳಿಗೆಲ್ಲಾ ಒಡೆಯನೆನಿಸಿ ಕೊಂಡು, ಜಂಭಾಸುರ, ಪಾಕಾಸುರ ಮೊದಲಾದ ದೈತ್ಯರನ್ನು ಗೆದ್ದು, ಜಂಭಾರಿ, ಪಾಕಶಾಸನ, ಎಂದು ಹೆಸರು ಇಡಿಸಿ ಕೊಂಡು, ಹೊಗಳಿಸಿ

ಕೊಳ್ಳುವವನು. ಏಳು! ನನ್ನೊಡನೆ ಕಾಳಗಕ್ಕೆ ಬಾ! ನೋಡೋಣಾ, ಎನ್ನಲು;
ಇಂದ್ರನು ಗಡ ಗಡನೆ ನಡುಗುತ್ತ,—ಐಯ್ಯಾ, ದೈತ್ಯ ರಾಜನೇ, ಎಲ್ಲಿಯಾ
ದರೂ ಬೆಂಕಿಯೊಡನೆ ಅರಳೆಗೂ, ಶಿಂಗನೊಡನೆ ಮೊಲಕ್ಕೂ, ಗರುಡನೊ
ಡನೆ ಹಾವಿಗೂ, ಜಗಳವಾದರೆ, ಬದುಕುವವೇ? ಹಾಗೆ ನಿನ್ನೊಡನೆ ನಾನು
ಜಗಳವಾಡಿದರೆ, ಬದುಕ ಬಲ್ಲೆನೇ? ನಿನಗೆ ನಾನು ಸರಿಯೇ? ಎಂದು ದೈನ್ಯ
ವಚನದಿಂದ ಹೇಳಿ ಕೊಳ್ಳಲು; ಆ ದೈತ್ಯನು,—ಛೀ ಹೇಡಿ! ನೀನು ಗಂಡಸು
ಎಂದು ಹುಟ್ಟ ಬಹುದೇ? ಸಾವಿಗೆ ಅಂಜಿ, ಮೂರು ಲೋಕದ ಅಧಿಪತಿ ಎಂದು
ಎನಿಸಿ ಕೊಂಡು, ಹೀಗೆ ಕಾಳಗಕ್ಕೆ ನಿಲ್ಲಲಾರದೆ ಹೋದ ನಿನ್ನ ಜನ್ಮವನ್ನು
ಸುಡ ಬೇಕು! ನೀನು ಪುರುಷಾಕಾರದ ಹೆಂಗಸು! ಎಂದು ಹೀಯಾಳಿಸಿ, ಅವ
ನನ್ನು ಬಿಟ್ಟು, ಅಲ್ಲಿಂದ ಅಗ್ನಿ, ಯಮ, ನಿರುತಿ, ವಾಯು, ಕುಬೇರ, ಮುಂತಾ
ದವರ ಪಟ್ಟಣಗಳಿಗೆ ಹೋಗಲು; ಅವರೆಲ್ಲರು ಇವನು ಬರುವದನ್ನು ಕೇಳಿ,
ಅವನ ಕಣ್ಣಿಗೆ ಬೀಳದೆ, ಔತು ಕೊಂಡರು.

ಅದನ್ನು ಕಂಡು, ಈ ಹಿರಣ್ಯಾಕ್ಷನು—ಅಯ್ಯೋ, ನನಗೆ ಎದುರಾಗುವವರು
ಯಾರೂ ಇಲ್ಲದೆ ಹೋದರಲ್ಲ! ನನ್ನ ತೋಳು ತೀಟೆಯನ್ನು ಎಲ್ಲಿ ಕಳೆದು
ಕೊಂಡೇನೆಂದು ಯೋಚಿಸುತ್ತ, ಸಮುದ್ರವನ್ನು ಹೊಕ್ಕು, ವರುಣನ ಪಟ್ಟಣ
ಕ್ಕೆ ಹೋಗಿ, ಆತನನ್ನು ಹಿಡಿದು,—ಕಾಳಗಕ್ಕೆ ಬಾ ಎಂದು ಕರೆಯಲು;—ಮಹಾ
ಪರಾಕ್ರಮ ಶಾಲಿಯಾದ ನಿನಗೆ ಬಡ ಪಾಪಿಯಾದ ನಾನು ಎದುರಾಗುವದಕ್ಕೆ
ಶಕ್ಯನೇ? ನನ್ನ ಕೈಯಲ್ಲಿ ತೀರದೆಂದು, ಕೈ ಮುಗಿದು, ಬೇಡಿ ಕೊಂಡನು. ಆಗ
ದೈತ್ಯನು ವರುಣನನ್ನು ಕುರಿತು—ನೀನು ಬಹಳ ಮುದುಕನಾಗಿದ್ದೀ. ನನಗೆ
ಎದುರಾಗಿ ನಿಲ್ಲುವ ಘಟ್ಟಿಗರ್ಯಾರಾದರೂ ಈ ಲೋಕಗಳಲ್ಲಿ ಇದ್ದರೆ, ಬೇಗ
ಹೇಳು, ಎಂದು ಕೇಳಿದನು. ಅದಕ್ಕೆ ವರುಣನು—ಎಲೈ, ದೈತ್ಯ ರಾಜನೇ,
ನೀನು ರಸಾತಲದಲ್ಲಿ ಹಾಕಿದ ಭೂಮಿಯನ್ನು ಕೋರ ದಾಡೆಯ ಮೇಲೆ ಎತ್ತಿ
ಕೊಂಡು, ಒಬ್ಬ ವರಾಹನು ಹೋಗುತ್ತಾನೆ. ಅವನೇನಾದರೂ ಒಂದು ವೇಳೆ
ನಿನ್ನ ಎದುರಿಗೆ ಜಗಳಕ್ಕೆ ನಿಂತರೆ, ನಿಲ್ಲ ಬಹುದು, ಎಂದು ಹೇಳಿದನು. ಅದನ್ನು
ಹಿರಣ್ಯಾಕ್ಷನು ಕೇಳಿ, ಕೋಪದಿಂದ ಮುಂಗಾಣದೆ, ಹೊರಟು, ಭೂ ತಳವ
ನ್ನು ಎತ್ತಿ ಕೊಂಡು ಬರುವ ವರಾಹನನ್ನು ಕಂಡು, ಅಬ್ಬರಿಸಿ, ಎದುರಾಗಿ
ನಿಂತು, ತನ್ನವರನ್ನು ಕುರಿತು—ಎಲೇ, ಎಲೇ, ಹಂದಿ! ಹಂದಿ! ಮುಜಭಾಪು!
ನಾವು ತಂದು ಹಾಕಿದ ಭೂಮಿಯನ್ನು ಎತ್ತಿ ಕೊಂಡು ಹೋಗುತ್ತದೆ. ಹೊ
ಯಿ! ಹೊಯಿ! ಹಿಂದಟ್ಟಿ! ಬಿಡದಿರ್ರಿ! ಬಲೆಗಳನ್ನು ಹಾಕಿ, ಕುತ್ತಿಗೆಯ ನೇಣು

ಗಳನ್ನು ಕಳಚಿ ನಾಯಿಗಳನ್ನು ಬಿಡಿ! ಇದು ನಮಗೆ ಇಂದಿನಾಹಾರಕ್ಕಾ
ಯಿತು. ಈ ಕ್ಷಣ ಕೊಲ್ಲದೆ ಬಿಡೆನು, ಎಂದು ಬೊಬ್ಬಿಡುತ್ತ, ವರಾಹನ ಎದು
ರಿಗೆ ಬಂದು ನಿಂತು, ಅದನ್ನು ಕುರಿತು—ಎಲಾ, ಹಂದಿಯೇ, ನಿನಗೆ ಇಷ್ಟು ಬೊ
ಬ್ಬೈ ಗಿಬ್ಬೈಗಳ್ಯಾಕೋ? ಮಾರಿಯ ಹಬ್ಬದಲ್ಲಿ ತಲೆ ಕೊಡುವ ಸೂಕರನೇ, ನಿನ್ನ
ಮೈ ಕೊಬ್ಬನ್ನು ನನ್ನೊಡನೆ ತೋರಿಸೇಳು! ನಿನ್ನ ಸತ್ವದ ಕಡುಹನ್ನು ನೆಗ್ಗು
ವೆನು. ಅರಸುವ ಬಳ್ಳಿಯು ಕಾಲನ್ನು ತೊಡರಿದಂತೆ ಈಗ ನೀನು ನನ್ನ ಕೈಗೆ
ಶಿಕ್ಕಿದೆ. ನಿನ್ನ ಅಸುವನ್ನು ಕುಡಿಯುವೆನು. ಇಗೋ, ಇದನ್ನು ಸಹಿಸಿಕೋ
ಎಂದು, ಗದೆಯಿಂದ ವರಾಹನನ್ನು ಹೊಯಿದನು. ಆ ವರಾಹನು ಹಾರಿ, ಆ ಹೊ
ಯಿತವನ್ನು ತಪ್ಪಿಸಿ ಕೊಂಡು, ತನ್ನ ಕೋರ ದಾಡೆಯ ಮೇಲಿದ್ದ ಭೂಮಿ
ಯನ್ನು ಮಹಾ ಶೇಷನ ಹೆಡೆಯ ಮೇಲೂ, ದಿಗ್ಗಜಗಳ ಮೇಲೂ, ಇಟ್ಟು,—
ಈ ರಕ್ಕಸನ ಬೊಬ್ಬಾಟವು ಬಲುವಾಗಿದೆ. ಇವನ ಉಕ್ಕನ್ನು ತಗ್ಗಿಸುವೆನು
ಎಂದು, ಗಗನಕ್ಕೆ ಹಾರಿ, ನೆಗೆದು, ಅಬ್ಬರಿಸಿ, ದೈತ್ಯನ ಹಲ್ಲುಗಳು ಮುರಿಯುವ
ಹಾಗೆ ಹೊಕ್ಕು ಹೊಯ್ಯಲು; ಕಂಡು, ದಾನವನು ತನ್ನ ಗದೆಯಿಂದ ವರಾಹನ
ಕೈಯಲ್ಲಿರುವ ಗದೆಯನ್ನು ಹೊಡೆದು, ಅಪ್ಪಳಿಸಲು; ಆ ಗದೆಯು ವರಾಹನ
ಕೈಯಿಂದ ಕೆಳಗೆ ಬಿತ್ತು.

ಆ ವೇಳೆಯಲ್ಲಿ ಮತ್ತು ದೈತ್ಯನು ಮಾಯೆಯಿಂದ ಮಳೆಯಾಗಿ, ವರಾಹನ
ಮೇಲೆ ಸುರಿದನು. ಗಿರಿ ಬೆಟ್ಟಗಳಾಗಿ, ಉರುಳಿದನು; ಕಲ್ಲು ಗುಂಡುಗಳನ್ನು
ಸುರಿದನು. ಹುಲಿ, ಸಿಂಹ, ಕರಡಿಗಳಾಗಿ, ಕಚ್ಚಿದನು. ಗಾಡಾಂಧಕಾರವಾಗಿ,
ಕಣ್ಣುಗಳನ್ನು ಮುಚ್ಚಿದನು. ಶಿಡಿಲು ಮಿಂಚುಗಳಾಗಿ, ಎರಗಿದನು. ನಾನಾ
ವಿಧವಾದ ಹಾವುಗಳಾಗಿ ಕಚ್ಚಿ, ವಿಷವನ್ನು ಕಾರಿದನು. ಕಾಡ್ಗಿಚ್ಚಾಗಿ, ದಹಿಸಿ
ದನು. ಮತ್ತು ಭೂತ, ಪ್ರೇತ, ಪಿಶಾಚಿಗಳ ತಂಡಗಳಾಗಿ, ವರಾಹನನ್ನು ಮುತ್ತಿ
ಕೊಂಡು,—ಹಂದಿ ಒಳಗೆ ಸಿಕ್ಕಿತು. ಹಿಡಿ, ಹಿಡಿ! ಬಡಿ, ಬಡಿ! ಕೊಲ್ಲು, ಕೊಲ್ಲು!
ತಿವಿ, ತಿವಿ! ಬಸುರಿನಿಂದ ಕರುಳುಗಳನ್ನು ಕೀಳು! ರಕ್ತವನ್ನು ಹೀರು! ಎಂದು,
ಈ ಪ್ರಕಾರ ಮಾಯಾ ಸಾಮರ್ಥ್ಯವನ್ನು ತೋರಿಸಿ, ಮತ್ತೆ ತನ್ನ ಪೂರ್ವದ ರೂ
ಪನ್ನೇ ಧರಿಸಿ,—ಎಲಾ, ಹಂದಿಯೇ, ಕಾದು ಬಾರೋ! ಹಿಡಿ ಮುಷ್ಟಿ ಯುದ್ಧವ!
ಎಂದು ತಿವಿಯಲು; ವರಾಹನು ರೋಷದಿಂದ ಆ ಹಿರಣ್ಯಾಕ್ಷನ ಹಣೆಯನ್ನು ಮು
ಷ್ಟಿಯಿಂದ ತಿವಿದನು. ಆ ಪೆಟ್ಟಿಗೆ ತಲೆ ಬಿರಿದು, ಹಣೆ ಒಡೆದು, ಹಲ್ಲುಗಳುದುರಿ, ರ
ಕ್ತವು ಸುರಿದು, ಭೂಮಿಯಲ್ಲಿ ಸತ್ತು ಬಿದ್ದನು. ಆ ಬಳಿಕ ವರಾಹಾವತಾರವನ್ನು
ಮಾಡಿದ ಮಹಾ ವಿಷ್ಣುವು ಭೂಮಿಯನ್ನು ಮೊದಲಿನಂತೆ ಸ್ಥಾಪಿಸಿ, ಹವ್ಯ ಕವ್ಯ

ಗಳು ಸರಾಗವಾಗಿ ನಡೆಯುವ ಹಾಗೆ ಮಾಡಿ, ದೇವತೆಗಳೂ, ಮುನಿಗಳೂ ಮೊದಲಾದ ಸಜ್ಜನರನ್ನು ಸಲಹಿ, ವೈಕುಂಠಕ್ಕೆ ಹೋದನು.

### 78. The Fourth or Man-lion Incarnation.

### ೭೮. ನೃಸಿಂಹಾವತಾರದ ಕಥೆ.

ಆ ಬಳಿಕ ಆ ಹಿರಣ್ಯಾಕ್ಷ ಹಿರಣ್ಯಕಶಿಪುಗಳ ತಾಯಿಯಾದ ದಿತಿಯು, ತನ್ನ ಕಿರೀ ಮಗನಾದ ಹಿರಣ್ಯಾಕ್ಷನು ವರಾಹಾವತಾರಿಯಾದ ಮಹಾ ವಿಷ್ಣುವಿನಿಂದ ಸಂಹಾರವಾದ ಸುದ್ದಿಯನ್ನು ಕೇಳಿ, ಶಿಡಿಲು ಬಡಿದು, ಬೇರು ಸಹಿತ ಮುರಿದು, ಇಳೆಗೆ ಒರಗಿದ ದೊಡ್ಡ ಮರದಂತೆ ಭೂಮಿಯಲ್ಲಿ ಬಿದ್ದು, ಮೂರ್ಛಿತಳಾಗಿ, ಸ್ವಲ್ಪ ಹೊತ್ತಿನ ಮೇಲೆ ಎಚ್ಚತ್ತು, ಎದ್ದು, ಹೊಟ್ಟೆಯನ್ನೂ ಬಾಯಿಯನ್ನೂ ಬಡುಕೊಳ್ಳುತ್ತ, ಮಗನ ಶಕ್ತಿ ಪರಾಕ್ರಮಗಳನ್ನು ನೆನ ನೆನದು, ಹಂಬಲಿಸುತ್ತ, ಕಣ್ಣೀರುಗಳನ್ನು ಸುರಿಸುತ್ತ, ತಲೆಯನ್ನು ಕೆದರಿ ಕೊಂಡು, ತನ್ನ ಹಿರೀ ಮಗನಾದ ಹಿರಣ್ಯಕಶಿಪುವಿನ ಬಳಿಗೆ ಬಂದು—ನನ್ನೊಡಲು ಬೆಂದುದು; ನಿನ್ನ ತಮ್ಮನು,—ಬೇಡ ಎಂದರೂ, ಕೇಳದೆ, ಭೂಮಿಯನ್ನು ಕೊಂಡು ಒಯಿದನು. ಆ ನಿಮಿತ್ತದಿಂದ ವಿಷ್ಣುವು ಆತನನ್ನು ಕೊಂದನು ಎಂದು, ಬಹಳ ದುಃಖಪಟ್ಟು, ಅವನ ಕೊರಳನ್ನು ಕಟ್ಟಿ ಕೊಂಡು,—ಎಲೈ, ಕಂದಾ, ಕೆಟ್ಟೆನು, ಕೆಟ್ಟೆನೈ, ಹಾ! ಎಂದು ಮೊರೆ ಇಡಲು;—

ಕೇಳಿ, ಹಿರಣ್ಯಕಶಿಪುವು ರೋಷ ಪರವಶನಾಗಿ, ಏಳಲು; ಒಡನೆ ಅವನ ಕಣ್ಣುಗಳು ಕೆಂಡಗಳನ್ನು ಕಾರಿದವು. ತರುವಾಯ ಅವನು—ಸತ್ತ ತಮ್ಮನ ಕಾಲಿನ ಬಳಿಯಲ್ಲಿ ಆ ಹಂದಿಯನ್ನು ಕೆಡಹಿ, ತತ್ತರದರಿದು, ಈಗಲೇ ದಿಗು ಬಲಿಯನ್ನು ಕೊಡುವೆನು ಎಂದು ಆರ್ಭಟಿಸುತ್ತ, ಹೊರಟು, ಹತ್ತು ದಿಕ್ಕುಗಳನ್ನೂ, ಸಮುದ್ರಗಳನ್ನೂ, ಅವುಗಳೊಳಗಣ ದ್ವೀಪಾಂತರಗಳನ್ನೂ, ರಸಾತಲ ತಲಾತಲ ಪಾತಾಳಾದಿ ಲೋಕಗಳನ್ನೂ ಅರಸಿ, ಆ ಮಹಾ ವಿಷ್ಣುವನ್ನು ಕಾಣದೆ, ಆ ವಿಷ್ಣುವು ಧರ್ಮದ ಬಳಿಯಲ್ಲಿ ಇರುವನು ಎಂದು, ತನ್ನ ಮನದಲ್ಲಿ ಎಣಿಸಿ, ವೇದ ಶಾಸ್ತ್ರಗಳ ಓದುವ ಬಳಿಗಳಲ್ಲಿಯೂ, ಜಪ ತಪ ಹೋಮ ನೇಮಗಳು ನಡೆಯುವ ಸ್ಥಳಗಳಲ್ಲಿಯೂ, ಗಂಗಾದಿ ಮಹಾ ನದಿಗಳ ತೀರಗಳಲ್ಲಿಯೂ, ಪುಣ್ಯ ಕ್ಷೇತ್ರಗಳಲ್ಲಿಯೂ, ಬಂದು ನೋಡಿ, ಹರಿಯನ್ನು ಕಾಣದೆ, ಆ ಸಜ್ಜನರನ್ನೆಲ್ಲಾ ಹೊಡೆದು, ಬಂದು, ಅವರು ಮಾಡುವ ಕರ್ಮಗಳನ್ನೆಲ್ಲಾ ಕೆಡಿಸಿ,—ಬ್ರಹ್ಮನ ಕುರಿತು ತಪಸ್ಸನ್ನು ಮಾಡಿ, ಯಾರಿಂದಲೂ ತನಗೆ ಮರಣವಾಗದಂತೆ ವರವನ್ನು ಪಡೆದು, ಆ ವರ ಬಲದಿಂದ—ಕಪಟಿಯಾದ ವಿಷ್ಣುವನ್ನು, ಹಾ

ಮಾಡಿಗನು ಮಂತ್ರ ಬಲದಿಂದ ಹುತ್ತದಲ್ಲಿ ಹೊಕ್ಕಿರುವ ಹಾವನ್ನು ಹೊರಗೆ ತೆಗೆದು, ಹಲ್ಲನ್ನು ಮುರಿಯುವ ಹಾಗೆ, ಎಲ್ಲಿ ಹೊಕ್ಕಿದ್ದರೂ, ಹಿಡಿದು, ಕೊಂದು ಹಾಕುವೆನು ಎಂದು, ತನ್ನ ಮನಸ್ಸಿನಲ್ಲಿ ನಿಶ್ಚೈಸಿ, ಹಿಂತಿರುಗಿ, ತಾಯಿಯ ಮನೆಗೆ ಬಂದು,—ತಾಯಿಯೇ, ಆ ಮಾಯಕಾರ ಹರಿಯು ಶಿಕ್ಕಲಿಲ್ಲ. ನನ್ನ ಆಯುಸ್ಸು ಇರುವ ವರಿಗೂ ಅವನು ಎಲ್ಲಿದ್ದರೂ, ಹೊಕ್ಕು, ಅರಸಿ, ಹಿಡಿದು, ಅವನನ್ನು ಸಾಯ ಬಡಿಯದೆ ಬಿಡೆನು. ಆದರೆ ನನ್ನ ಪ್ರಾಣಕ್ಕೆ ಭಯವಿಲ್ಲದಂತೆ ತಪಸ್ಸು ಮಾಡಿ, ವರವನ್ನು ಪಡೆದು ಕೊಂಡು ಬರುವೆನು. ಆ ವರಿಗೂ ಅಳದೆ ಇರು ಎಂದು, ತಾಯಿ ಮೊದಲಾದ ತನ್ನ ಸಂಸಾರದ ಜನಗಳನ್ನೆಲ್ಲಾ ಸಮಾಧಾನ ಪಡಿಸಿ, ಹೊರಟು, ಮಂದರ ಪರ್ವತಕ್ಕೆ ಬಂದು, ಬ್ರಹ್ಮದೇವನನ್ನು ಕುರಿತು, ಕಾಲಿನ ಹೆಬ್ಬೆಟ್ಟನ್ನು ನೆಲಕ್ಕೆ ಊರಿ, ನಿಂತು, ಕತ್ತನ್ನು ಎತ್ತಿ, ಕಣ್ಣು ಬಿಟ್ಟು, ಸೂರ್ಯನನ್ನು ನೋಡುತ್ತ, ಕೈ ಮುಗಿದು ಕೊಂಡು, ಸಂಪೂರ್ಣ ಭಕ್ತಿಯಿಂದ ಏಕಾಗ್ರ ಚಿತ್ತನಾಗಿ ತಪಸ್ಸನ್ನು ಅನೇಕ ಸಹಸ್ರ ವರುಷ ಮಾಡುತ್ತಿರಲು; ಅವನ ಮೈ ಮೇಲೆ ಹುತ್ತ ಬೆಳೆದು, ಮೈ ಸುತ್ತಲೂ ಬಿದುರು ಬೆತ್ತಗಳು ಬೆಳೆದು, ಮುಚ್ಚಿ ಕೊಂಡವು. ಗಡ್ಡ ಮೀಸೆಗಳು ಆಲದ ಬೀಳುಗಳು ನೆಲಕ್ಕೆ ಇಳಿಯುವಂತೆ ಭೂಮಿಗೆ ಇಳಿದು, ಬೇರು ಹರಿದವು. ಕಾಲು ಕೈಗಳ ಉಗುರುಗಳು ಬಹಳ ಉದ್ದವಾಗಿ ಬೆಳೆದವು. ಗೆದ್ದಲು ಹುಳುಗಳು ಶರೀರದ ಚರ್ಮ ಮಾಂಸಗಳನ್ನು ತಿಂದವು. ದೈತ್ಯನು ಬರೀ ಅಸ್ತಿ ಮಯವಾಗಿದ್ದನು.

ಆ ವೇಳೆಯಲ್ಲಿ ತಪೋಗ್ನಿಯು ಭುಗಿಲೆಂದು ಉಬ್ಬಿ, ನೆತ್ತಿಯನ್ನು ಒಡೆದು, ಲೋಕಗಳನ್ನು ವ್ಯಾಪಿಸಿ, ಸುಡುತ್ತಿರಲು; ಸಕಲ ಲೋಕಗಳು ಕಂಗೆಟ್ಟು, ಬ್ರಹ್ಮನ ಬಳಿಗೆ ಓಡಿ ಹೋಗಿ,—ಯಾವೋನೋ ಒಬ್ಬನ ತಪೋಗ್ನಿಯು ಲೋಕದ ಪ್ರಜೆಗಳನ್ನೆಲ್ಲಾ ಬೆನ್ನಟ್ಟಿ ಸುಡುತ್ತಲಿದೆ. ನೀನು ಕೃಪೆಯಿಂದ ನಮ್ಮನ್ನು ಕಾಪಾಡ ಬೇಕೆಂದು ಬೇಡಿ ಕೊಂಡರು. ಆಗ ಬ್ರಹ್ಮನು ಜ್ಞಾನ ದೃಷ್ಟಿಯಿಂದ—ತಪವನ್ನು ಮಾಡುವವನು ತನ್ನ ಮೊಮ್ಮಗನಾದ ಹಿರಣ್ಯಕಶಿಪುವೆಂದು ತಿಳಿದು, ಅವರನ್ನೆಲ್ಲಾ ಸಮಾಧಾನಾ ಮಾಡಿ, ಕಳುಹಿಸಿ, ತಾನು ಹಂಸೆಯನ್ನೇರಿ ಕೊಂಡು, ಅವನು ತಪಸ್ಸು ಮಾಡುವ ಬಳಿಗೆ ಬಂದು, ಅಸ್ತಿ ಪಂಜರ ಮಾತ್ರ ಇರುವ ಆತನನ್ನು ನೋಡಿ,—ಹೀಗೆ ಭಕ್ತಿಯಿಂದ ಕಾಯ ಕ್ಲೇಶವನ್ನು ಸಹಿಸಿ ಕೊಂಡು, ತಪಸ್ಸು ಮಾಡಿದವರು ಯಾರು ಇಲ್ಲ ಎಂದು ಮೆಚ್ಚಿ, ತನ್ನ ಕೈಯಲ್ಲಿದ್ದ ಕಮಂಡಲದ ಉದುಕವನ್ನು ಅವನ ಮೇಲೆ ಚಿಮಿಕಿಸಲು; ಆ ಹಿರಣ್ಯಕಶಿಪು ತನ್ನ ಸುತ್ತ ಬೆಳೆದಿರುವ ಬಿದಿರು ಬೆತ್ತಗಳನ್ನು ಒಡ ಕೊಂಡು, ಹುತ್ತದಿಂದ ಹೊರ

ಟು ಬಂದು, ಒತ್ತಿನಲ್ಲಿ ನಿಂತಿರುವ ಬ್ರಹ್ಮನನ್ನು ಕಂಡು, ಬಹಳ ಸಂತೋಷದಿಂದ ಆತನ ಕಾಲುಗಳಿಗೆ ನಮಸ್ಕರಿಸಿ, ಭೂಮಿಯಲ್ಲಿ ಬಿದ್ದಿರಲು; ಬ್ರಹ್ಮನು—ಏಳು, ಏಳೈ, ಕಂದನೇ, ಸಾಕು! ನೀನು ಬಹು ಕಾಲದಿಂದ ಆಯಾಸ ಪಟ್ಟದ್ದು ಸಾಲದೇ? ನಿನ್ನ ಮನೋರಥವೇನು? ಬೇಡು. ಈಗ ಕೊಡುವೆನು ಎನಲು; ಹಿರಣ್ಯಕಶಿಪುವು ಎದ್ದು, ಕೈ ಮುಗಿದು—ಎಲೈ, ಪಿತಾಮಹನೇ, ಸುರರೂ, ನರರೂ, ಉರಗರೂ, ಯಕ್ಷರೂ, ಮೃಗಗಳೂ, ಇನ್ನೂ ನಾನಾವಿಧ ಪ್ರಾಣಿಗಳೂ, ಇವರೆಲ್ಲರಿಂದಲೂ, ಮತ್ತು ಹಿಮ, ಜಲ, ಭೂಮಿ, ಆಕಾಶ, ಹಗಲು, ರಾತ್ರಿ, ಒಳಗೆ, ಹೊರಗೆ, ನಿದ್ರೆ ಮಾಡುವಲ್ಲಿ ಉರಿ, ಸಿಡಿಲು, ಶಿಲೆ, ಅಖಿಳ ಶಸ್ತ್ರ, ವಿಷ, ತೃಣ, ಕಾಷ್ಟ, ಮಂತ್ರೋಚ್ಚಾರಣೆ, ವ್ಯಾಧಿ, ಇವುಗಳಿಂದಲೂ, ನಾನು ಸಾಯದಂತೆ ವರವನ್ನು ಕೊಡ ಬೇಕು. ಬಹಳ ಮಾತೇನು? ಸರ್ವರು ನನ್ನನ್ನು ಬಂದು, ಓಲೈಸ ಬೇಕು. ಈ ಪ್ರಕಾರ ವರವನ್ನು ಕೊಡ ಬೇಕು ಎಂದು ಕೇಳಿದನು.

ಬ್ರಹ್ಮನು ತನ್ನ ಮನಸ್ಸಿನಲ್ಲಿ—ಇವನು ಮಹಾ ದುಷ್ಟನು. ಇಂಥಾ ವರಗಳನ್ನು ಕೇಳಿ ಕೊಂಡನು. ಕೊಟ್ಟರೆ, ತಕ್ಷಣದಲ್ಲಿಯೇ, ಲೋಕಗಳನ್ನೆಲ್ಲಾ ಸುಟ್ಟು, ಬೂದಿ ಮಾಡುವನು. ಕೊಡದೆ ಇದ್ದರೆ, ನನ್ನ ಭಕ್ತರು ನೋಡಿ, ನಗುವರು. ಏನಾದರೂ ಆಗಲಿ, ಇವನು ಕೇಳಿದಂತೆ ಕೊಡ ಬೇಕಾಗಿ ಬಂತು ಎಂದು ನಿಶ್ಚೈಸಿ, ದೈತ್ಯನನ್ನು ಕುರಿತು—ನಿನ್ನ ಮನಸ್ಸಿನ ಇಷ್ಟಪ್ರಕಾರ ವರಗಳನ್ನು ಕೊಟ್ಟೆನು. ಹೋಗು! ಎಂದು ಹೇಳಿ, ಅದೃಶ್ಯನಾದನು. ಆಗ ಹಿರಣ್ಯಕಶಿಪು ಮಹಾ ಸಂತೋಷದಿಂದ ದೈತ್ಯರ ಬಡಗಿಯಾದ ಮಯನನ್ನು ನೆನೆಯಲು; ಆತನು ಬಂದು, ಕೈಮುಗಿದು,—ನನಗೇನಪ್ಪಣೆ? ಎಂದು ಕೇಳಿದ್ದಕ್ಕೆ—ಕ್ಷಣಮಾತ್ರದಲ್ಲಿ ನೀನು ನನ್ನ ಪಟ್ಟಣಕ್ಕೆ ಹೋಗಿ, ಪಟ್ಟಣವನ್ನು ಶೃಂಗರಿಸು, ಎಂದು ಹೇಳಿ, ಕಳುಹಿಸಿ ಕೊಟ್ಟನು. ಆ ಮಯನು ಆತನ ಅಪ್ಪಣೆಯನ್ನು ತಲೆಯಲ್ಲಿ ಆಂತು, ಪಟ್ಟಣವನ್ನು ಜಾಗ್ರತೆಯಾಗಿ ಶೃಂಗರಿಸಿದನು. ತರುವಾಯ ಹಿರಣ್ಯಕಶಿಪುವು ಗೋಧೂಳೀ ಲಗ್ನದಲ್ಲಿ ಪಟ್ಟಣವನ್ನು ಹೊಕ್ಕು, ಒಂದು ದಿವಸ ಅಲ್ಲಿ ಇದ್ದು, ಮಾರನೇ ದಿವಸವೇ ದೈತ್ಯ ಭಟರೊಡನೆ ಕೂಡಿ, ಹೊರಟು, ಇಂದ್ರಲೋಕಕ್ಕೆ ಹೋಗಿ, ಇಂದ್ರಾದಿ ಅಷ್ಟ ದಿಕ್ಪಾಲಕರನ್ನು ಯುದ್ಧಕ್ಕೆ ಕರೆಯಲು; ಆ ಇಂದ್ರನು ಅಷ್ಟ ದಿಕ್ಪಾಲಕರೊಡನೆ ಕೂಡಿ, ಹಿರಣ್ಯಕಶಿಪುವಿನೊಡನೆ—ನಾವು ನಿನ್ನ ಸಂಗಡ ಯುದ್ಧ ಮಾಡಲಾರೆವು. ನಿನಗೆ ಕಪ್ಪಗಳನ್ನು ಕೊಟ್ಟು, ನೀನು ಹೇಳಿದಂತೆ ಕೇಳಿ ಕೊಂಡು ಇರುವೆವು ಎಂದು, ವಿನಯದಿಂದ ಹೇಳಿ ಕೊಂ

ಡದ್ದರಿಂದ, ಅವರೆಲ್ಲರನ್ನೂ, ಸಂಗಡ ಕರೆದು ಕೊಂಡು, ಅವರು ಕೊಟ್ಟ ಕಪ್ಪಗಳನ್ನು ತೆಗಿಸಿ ಕೊಂಡು, ತನ್ನ ಪಟ್ಟಣಕ್ಕೆ ಹಿಂತಿರುಗಿ ಬಂದು, ಸಿಂಹಾಸನದಲ್ಲಿ ಕುಳಿತು ಕೊಂಡು, ತ್ರಿಲೋಕಾಧಿಪತಿಯಾಗಿ—ಭೂಮಿಯಲ್ಲಿ ಮಾಡುವ ಕರ್ಮಗಳಲ್ಲಿ ಎಲ್ಲರು ನನ್ನ ಹೆಸರು ಹೇಳಿ, ಆಹುತಿಗಳನ್ನು ಕೊಡ ಬೇಕೇ ಹೊರ್ತು, ಇಂದ್ರನೇ ಮೊದಲಾದ ಒಬ್ಬ ದೇವತೆಗಳ ಹೆಸರನ್ನು ಹೇಳಿಯೂ ಕೊಡ ಕೂಡದು ಎಂದು, ಎಲ್ಲರಿಗೂ ಕಟ್ಟು ಮಾಡಿಸಿ, ತಾನೇ ತಾನಾಗಿ ಎಲ್ಲರಿಂದಲೂ ಓಲೈಸಿ ಕೊಂಡು ಇದ್ದನು.

ಹೀಗಿರುವಲ್ಲಿ ಒಂದು ದಿವಸ ಸಭೆಯಲ್ಲಿ, ಮಹಾ ವಿಷ್ಣುವು ತನ್ನ ತಮ್ಮನಾದ ಹಿರಣ್ಯಾಕ್ಷನನ್ನು ಕೊಂದದ್ದನ್ನು ನೆನಸಿ ಕೊಂಡು,—ಆ ವಿಷ್ಣುವನ್ನು ಕೊಂದು ಹಾಕದ ಮೇಲೆ ನಾನು ಬದುಕಿದ್ದೂ, ಈ ಸಕಲ ಜನರಿಂದ ಸೇವೆ ಮಾಡಿಸಿ ಕೊಳ್ಳುವದೂ, ನನ್ನ ಈ ತ್ರಿಲೋಕಾಧಿಪತ್ಯವೂ ವ್ಯರ್ಥವೆಂದು ಎಣಿಸಿ,—ಎಲ್ಲಿ ಇದ್ದರೂ, ಅವನನ್ನು ಹಿಡಿದು, ಕೊಂದು ಹಾಕ ಬೇಕೆಂದು, ತನ್ನ ಚತುರಂಗ ಬಲದೊಡನೆ ಕೂಡಿ, ಹೊರಟನು. ಆಗ ಆತನ ಸೇನಾ ರಭಸಕ್ಕೆ ಹದಿನಾಲ್ಕು ಲೋಕವು ಅಲ್ಲೋಲ ಕಲ್ಲೋಲವಾಗಿ ಬೆದರಿ, ಕ್ಷೀರ ಸಮುದ್ರದ ಧಡಕ್ಕೆ ಹೋಗಿ, ಶ್ರೀ ಮಹಾ ವಿಷ್ಣುವಿನ ಸಂಗಡ ದೂರ ಹೇಳಿ ಕೊಳ್ಳಲು; ಆತನು—ದುಷ್ಟ ಹಿರಣ್ಯಕಶಿಪುವನ್ನು ಹಿಂತಿರಿಗಿ, ಪಟ್ಟಣಕ್ಕೆ ಹೋಗುವಂತೆ ಮಾಡುತ್ತಲಿದ್ದೇನೆ. ನೀವು ಹೆದರ ಬೇಡಿ! ನಿಮ್ಮ ನಿಮ್ಮ ಲೋಕಗಳಿಗೆ ಹೋಗಿ, ಸ್ವಸ್ಥವಾಗಿ ಇರ್ರಿ ಎಂದು ಹೇಳಿ, ನಂಬಿಗೆಯನ್ನು ಕೊಟ್ಟು, ಕಳುಹಿಸಿ, ಆ ಮೇಲೆ ಆ ಹಿರಣ್ಯಕಶಿಪುವು ಬರುವ ಮಾರ್ಗದಲ್ಲಿ ಮಾಯೆಯಿಂದ ಒಂದು ಋಷ್ಯಾಶ್ರಮವನ್ನು ಕಲ್ಪಿಸಿ ಕೊಂಡು, ತಾನು ಜಡೆಯನ್ನು ಧರಿಸಿ, ಕುತ್ತಿಗೆಯಲ್ಲಿ ರುದ್ರಾಕ್ಷೀ ಮಾಲಿಕೆಗಳನ್ನೂ, ತಲೆಗೆ ರುದ್ರಾಕ್ಷೀ ಕುಲಾವಿಯನ್ನೂ, ಕೈಗೆ ರುದ್ರಾಕ್ಷೀ ಕಂಕಣವನ್ನೂ ಹಾಕಿ ಕೊಂಡು, ಬಲ ಗೈಯ ಅನಾಮಿಕವೆಂಬ ಬೆರಳಿಗೆ ದರ್ಭೆ ಹುಲ್ಲಿನಿಂದ ಪವಿತ್ರವನ್ನು ಮಾಡಿ, ಇಟ್ಟು ಕೊಂಡು, ಒಂದು ಕೌಪೀನ ಮಾತ್ರವನ್ನು ಧರಿಸಿ, ಆ ಆಶ್ರಮದಲ್ಲಿರುವ ಕೊಳದ ಧಡದಲ್ಲಿ ಒಂದು ದೊಡ್ಡ ಹುಲೀ ಚರ್ಮದ ಮೇಲೆ ಕುಳಿತು ಕೊಂಡು, ಆ ಕೊಳದ ಪಾವಟಿಗೆಯ ಕಲ್ಲಿನ ಮೇಲೆ ಮಳಲಿನಲ್ಲಿ ಒಂದು ದೊಡ್ಡ ಲಿಂಗವನ್ನು ಮಾಡಿ, ಆ ಲಿಂಗವನ್ನು ತುಂಬೇ ಹೂವುಗಳಿಂದಲೂ, ಉಮ್ಮತ್ತದ ಹೂವುಗಳಿಂದಲೂ, ಬಿಲ್ಪತ್ರಗಳಿಂದಲೂ, ಗಂಧಾಕ್ಷತೆಗಳಿಂದಲೂ ಪೂಜೇ ಮಾಡಿ, ಶಿವ ಧ್ಯಾನವನ್ನು ಮಾಡುತ್ತ, ಪಾಶುಪತ ಮತಸ್ಥನಾದ ಮುನಿಯಂತೆ ಕುಳಿತು ಕೊಂಡಿದ್ದನು.

ಅಷ್ಟರಲ್ಲಿಯೇ ಈ ಹಿರಣ್ಯಕಶಿಪುವು ಸೇನಾ ಸಮೇತನಾಗಿ ದಾರಿಯಲ್ಲಿ ಬರುತ್ತ, ಈ ತನನ್ನು ಕಂಡು—ಇವನ್ಯಾರೋ? ಮಹಾತ್ಮನಾದ ಶಿವ ಯೋಗಿಯಾಗಿ ಕಾಣುತ್ತಾನೆ ಎಂದು ಯೋಚಿಸಿ, ತಾನು ಹತ್ತಿ ಕೊಂಡಿದ್ದ ಅಂದಣವನ್ನು ಇಳಿದು, ಈ ಕಪಟ ಶಿವ ಯೋಗಿಯ ಬಳಿಗೆ ಬಂದು, ಭಯ ಭಕ್ತಿಯಿಂದ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಕೈ ಮುಗಿದು, ನಿಂತು ಕೊಂಡು,—ಎಲೈ, ಮಹಾನುಭಾವನೇ, ನೀನು ಭೂತ ಭವಿಷ್ಯದ್ವರ್ತಮಾನಗಳನ್ನೂ, ಸಕಲ ಲೋಕಗಳಲ್ಲಿಯೂ ನಡೆಯುವ ಸುದ್ದಿಗಳನ್ನೂ, ಅರಿತಂಥ ಮಹಾ ಜ್ಞಾನ ನಿಧಿಯು ಎಂದು, ನಿನ್ನನ್ನು ಕುರಿತು ಒಂದು ಮಾತನ್ನು ಬಿನ್ನವಿಸುತ್ತೇನೆ. ಅದೇನಂದರೆ,—ಮಾಯಾವಿಯಾದ ವಿಷ್ಣುವು ಹಂದಿಯ ರೂಪನ್ನು ಧರಿಸಿ, ನನ್ನ ತಮ್ಮನನ್ನು ಕೊಂದು ಹಾಕಿದನು. ಆ ದುಖ್ಖದಿಂದ ಆತನನ್ನು ನಾನು ಕೊಂದು ಹಾಕಬೇಕೆಂದು, ಎಲ್ಲಿ ಹುಡುಕಿದಾಗ್ಯೂ, ಶಿಕ್ಕಲಿಲ್ಲ. ಈಗ ವರ ಬಲದಿಂದ ನಾನು ಸಾವಿಲ್ಲದವನಾಗಿದ್ದೇನೆ. ನನ್ನ ಮೇಲೆ ದಯವಿಟ್ಟು, ಆ ಕಪಟಿಯಾದ ವಿಷ್ಣುವು ಎಲ್ಲಿದ್ದಾನೋ, ತಾವು ಜ್ಞಾನ ದೃಷ್ಟಿಯಿಂದ ನೋಡಿ, ತಿಳಿದು, ಹೇಳಿದರೆ, ಆತನನ್ನು ಕೊಂದು, ನನ್ನ ದುಖ್ಖವನ್ನು ತೀರಿಸಿ, ಕೊಂಡೇನು, ಅಂದನು.

ಆ ಮಾತನ್ನು ಕೇಳಿ, ಕಪಟ ಶಿವ ಯೋಗಿಯು ಕಣ್ಣುಗಳನ್ನು ಮುಚ್ಚಿಕೊಂಡು, ಒಂದು ಘಳಿಗೆ ಧ್ಯಾನಿಸುವವನ ಹಾಗೆ ಧ್ಯಾನಿಸಿ, ಆ ಮೇಲೆ ಕಣ್ಣುಗಳನ್ನು ತೆರೆದು, ಆ ಹಿರಣ್ಯಕಶಿಪುವನ್ನು ನೋಡಿ, ನಸು ನಗುತ್ತ—ಎಲೈ, ದೈತ್ಯಾಧಿರಾಜನೇ, ನೀನು ಹೇಳಿದಂತೆ ಆ ವಿಷ್ಣುವು ಮಹಾ ಕಪಟಿಯು ಅಹುದು. ಆತನು ಇರುವ ಸ್ಥಳಗಳು ಮೂರು. ಯಾವವಂದರೆ, ವೈಕುಂಠವೂ, ಕ್ಷೀರ ಸಮುದ್ರವೂ, ಸೂರ್ಯ ಮಂಡಲವೂ. ಈಗ ನೀನು ವರ ಬಲದಿಂದ ಅವಧ್ಯನಾದಿ ಎಂದು ತಿಳಿದು,—ತನ್ನನ್ನು ಎಲ್ಲಿ ಬಂದು ಕೊಂದಾನೋ? ಎಂಬದಾಗಿ, ನಿನ್ನ ಭಯದಿಂದ ಆ ಮೂರು ಸ್ಥಳಗಳನ್ನು ಬಿಟ್ಟು, ನಿನ್ನ ಹೊಟ್ಟೆಯಲ್ಲಿಯೇ ಬಂದು ಹೊಕ್ಕೊಂಡು ಇದ್ದಾನೆ, ಅಂದನು. ಅದಕ್ಕೆ ಹಿರಣ್ಯಕಶಿಪುವು—ಎಲೈ, ಮುನಿಯೇ, ನನ್ನ ಹೊಟ್ಟೆಯಲ್ಲಿ ಅವನು ಹೋಗುವದು ಹ್ಯಾಗೆ? ಈ ಮಾತು ಸುಳ್ಳಾಗಿ ತೋರುತ್ತದೆ, ಎನಲು; ಶಿವ ಯೋಗಿಯು—ನಾನು ಸುಳ್ಳು ಹೇಳ ತಕ್ಕವನಲ್ಲ. ಇಗೋ, ನಿನಗೆ ಪರೀಕ್ಷೆಯನ್ನು ತೋರಿಸಿ ಕೊಡುತ್ತೇನೆಂದು ಹೇಳಿ, ಆ ಕ್ಷಣದಲ್ಲಿಯೇ ಅದೃಶ್ಯನಾಗಿ, ಅವನ ಹೊಟ್ಟೆಯಲ್ಲಿ ಹೊಕ್ಕು,—ಎಲಾ, ಖೂಳ ರಕ್ಕಸನೇ, ನಿನ್ನ ನಾನು ಕೊಂದು ಹಾಕುವ ವರಿಗೂ, ಮತ್ತೆಲ್ಲಿಯೂ ಇರದೆ, ನಿನ್ನ ಹೊಟ್ಟೆಯಲ್ಲಿಯೇ ಇರುತ್ತೇನೆ. ನೀನು ಎಲ್ಲಿ ಹುಡುಕಿದಾಗ್ಯೂ, ನಿನಗೆ

ನಾನು ಶಿಕ್ಕೆನು. ನನ್ನನ್ನು ನೀನು ನೋಡ ಬೇಕಾದರೆ, ನಿನ್ನ ಹೊಟ್ಟೆಯನ್ನು ನೀನೇ ಶೀಳಿ ಕೊಂಡು, ನೋಡಿದರೆ, ನಾನು ಕಾಣಿಸಿ ಕೊಳ್ಳುವೆನು. ಮಹಾತ್ಮನಾದ ಶಿವ ಯೋಗಿ ಹೇಳಿದ ಮಾತು ಸುಳ್ಳಲ್ಲ, ನಿಜವೆಂದು ತಿಳಿ ಎಂದು ಘರ್ಜಿಸಿ ಹೇಳಿದ್ದರಿಂದ, ಈ ಹಿರಣ್ಯಾಕಶಿಪುವು ಆ ಮಾತನ್ನು ಕೇಳಿ—ಅಹಹ! ನನ್ನಿಂದ ಮೋಸ ಹೋಯಿತು. ಆ ವಿಷ್ಣುವೇ ಶಿವ ಯೋಗಿಯಾಗಿ ನನಗೆ ಹೇಳಿ, ನನ್ನ ಮುಂದೆಯೇ ಅದೃಶ್ಯವಾಗಿ, ನನ್ನ ಹೊಟ್ಟೆಯನ್ನು ಹೊಕ್ಕನು. ಆ ಶಿವ ಯೋಗಿ ಇದ್ದಾಗಲೇ ಅವನನ್ನು ಹಿಡಿದು, ಕೊಂದು ಹಾಕ ಬೇಕಾಗಿತ್ತು. ತಿಳಿಯದೆ ಹೋಯಿತು. ಈಗ ಏನು ಮಾಡಲಿ? ಪಾಪಿಯು ನನ್ನ ಹೊಟ್ಟೆಯನ್ನು ಹೊಕ್ಕನಲ್ಲ! ಇವನನ್ನು ಇನ್ನು ನಾನು ಕೊಲ್ಲುವ ಬಗೆ ಹ್ಯಾಗೆ? ಎಂದು ಹಿಂತಿರುಗಿ, ಯಥಾ ಪ್ರಕಾರಕ್ಕೆ ಸೇನಾ ಸಮೇತನಾಗಿ ತನ್ನ ಪಟ್ಟಣಕ್ಕೆ ಬಂದು ಶೇರಿದನು.

ಇತ್ತಲಾ ಮಹಾ ವಿಷ್ಣುವು ನಾರದನನ್ನು ಕರೆದು, ಹಿರಣ್ಯಾಕಶಿಪುವಿನ ಹೆಂಡತಿಯು ಬಹಳ ಪರಿಶುದ್ಧೆಯು. ನೀನು ಅವಳ ಬಳಿಗೆ ಹೋಗಿ,—ಏಕಾಂತದಲ್ಲಿ ವಿಷ್ಣುವನ್ನೇ ಧ್ಯಾನಿಸುತ್ತ ಇದ್ದಲ್ಲಿ, ಲೋಕೈಕ ವೀರನಾದ ಪರಮ ಭಾಗವತ ಶಿರೋಮಣಿಯಾದ ಗಂಡು ಮಗನು ಹುಟ್ಟುವನು, ಎಂದು ಹೇಳಿ ಬಾ, ಅನ್ನಲಾಗಿ; ಆತನು ಆಕೆಯ ಬಳಿಗೆ ಹೋಗಿ, ಅದೇ ಪ್ರಕಾರ ಆಕೆಗೆ ರಹಸ್ಯವಾಗಿ ಉಪದೇಶಿಸಿ ಬಂದನು. ಅವಳು ನಾರದನ ಉಪದೇಶದ ಪ್ರಕಾರ ಸದಾ ಕಾಲದಲ್ಲಿಯೂ ಹೃದಯದಲ್ಲಿ ಹರಿಯನ್ನೇ ಧ್ಯಾನಿಸುತ್ತಾ ಇದ್ದದರಿಂದ, ಸಂಗಾತಲೇ ಗರ್ಭಿಣಿಯಾದಳು.

ಹೀಗಿರುವಲ್ಲಿ ಹಿರಣ್ಯಾಕಶಿಪುವು ಮತ್ತೊಂದು ದಿವಸ—ವಿಷ್ಣುವನ್ನು ಹ್ಯಾಗೆ ಕೊಲ್ಲಲಿ? ಎಂದು ಯೋಚಿಸುತ್ತ, ಶಿವನನ್ನು ತಪಸ್ಸು ಮಾಡಿ, ಮೆಚ್ಚಿಸಿ, ವಿಷ್ಣುವು ನನ್ನ ಕೈಗೆ ಶಿಕ್ಕುವ ಹಾಗೆ ವರವನ್ನು ಕೇಳಿ ಕೊಂಡು, ಆ ವರ ಬಲದಿಂದ ಮಾಯಾವಿಯಾದ ವಿಷ್ಣುವನ್ನು ಹಿಡಿದು, ಕೊಂದು ಹಾಕುವೆನು ಎಂದು ನಿಶ್ಚೈಸಿ ಕೊಂಡು, ತನ್ನ ಮಂತ್ರಿಗಳ ಮೇಲೆ ರಾಜ್ಯ ಭಾರವನ್ನು ಇರಿಸಿ, ಹಿಮವತ್ಪರ್ವತಕ್ಕೆ ಒಬ್ಬನೇ ಹೋಗಿ, ಶಿವನನ್ನು ಕುರಿತು ತಪಸ್ಸು ಮಾಡುತ್ತಾ ಇದ್ದನು. ಅಷ್ಟರಲ್ಲಿ ಇಂದ್ರಾದ್ಯಷ್ಟ ದಿಕ್ಪಾಲಕರು ಸಮಸ್ತ ದೇವ ಸಮೂಹದೊಡನೆ ಕೂಡಿ, ಮಹಾ ವಿಷ್ಣುವಿನ ಬಳಿಗೆ ಬಂದು,—ಎಲೈ, ಸ್ವಾಮಿಯೇ, ಆ ದುಷ್ಟನಾದ ಹಿರಣ್ಯಾಕಶಿಪುವು ಮತ್ತೆ ಶಿವನನ್ನು ಕರಿತು ತಪಸ್ಸಿಗೆ ಕುಳಿತು ಇದ್ದಾನೆ. ಈಗಲೇ ಅವನಿಂದ ಸಕಲ ಲೋಕಗಳು ಧೂಳೀ ಪಟವಾಗಿ ಹೋದವು. ಮತ್ತೆ ಆ ದುಷ್ಟನು ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ, ಎಂಥ ವರ

ವನ್ನು ಕೇಳಿ ಕೊಂಡು ಬಂದು, ಲೋಕಗಳನ್ನೆಲ್ಲಾ ಏನು ಮಾಡುತ್ತಾನೋ, ತಿಳಿಯದು. ಮುಂದೆ ನಮಗೇನು ಅಪ್ಪಣೇ? ಎಂದು ಕೇಳಿದರು. ಅದಕ್ಕೆ ಶ್ರೀ ಮಹಾ ವಿಷ್ಣುವು ಇಂದ್ರನನ್ನು ಕರೆದು, ಏಕಾಂತದಲ್ಲಿ ಒಂದು ಮಾತು ಹೇಳಿದ್ದರಿಂದ, ದೇವೇಂದ್ರನು ಸಂತೋಷ ಪಟ್ಟು, ಮಹಾ ವಿಷ್ಣುವಿಗೆ ನಮಸ್ಕರಿಸಿ, ತಿರಿಗಿ ಅಮರಾವತೀ ಪಟ್ಟಣಕ್ಕೆ ಬಂದು, ವಿಷ್ಣು ತನ್ನೊಳಗೆ ಗುಟ್ಟಾಗಿ ಹೇಳಿದ ಪ್ರಕಾರ ಸಮಸ್ತ ದೇವತೆಗಳೊಡನೆ ಕೂಡಿ, ರಾತ್ರೆ ವೇಳೆಯಲ್ಲಿ ಒಮ್ಮಿಂದೊಮ್ಮೆ ಹಿರಣ್ಯಕಶಿಪುವಿನ ಶೋಣಿತ ಪುರಕ್ಕೆ ಹೋಗಿ, ಮುತ್ತಿಕೊಂಡು, ಆತನ ಮಂತ್ರಿಗಳು ಮೊದಲಾದ ಸಕಲ ದೈತ್ಯರನ್ನು ಸದೆ ಬಡಿದು, ಪೂರ್ಣ ಗರ್ಭಿಣಿಯಾದ ಆ ಹಿರಣ್ಯಕಶಿಪುವಿನ ಹೆಂಡತಿಯನ್ನು ಅಂತಃಪುರವನ್ನು ಹೊಕ್ಕು, ಕೈ ಶೆರೆ ಹಿಡಿದು ಕೊಂಡು, ಅಮರಾವತೀ ಪಟ್ಟಣಕ್ಕೆ ಹಿಂತಿರುಗಿ ಬಂದನು.

ಅಷ್ಟರೊಳಗೆ ನಾರದ ಮಹಾ ಮುನೀಶ್ವರನು ದೇವೇಂದ್ರನ ಬಳಿಗೆ ಬಂದು, —ಏನೈಯ್ಯಾ, ಇಂದ್ರನೇ, ನೀನು ಇಂಥ ಅನುಚಿತವಾದ ಕೆಲಸವನ್ನು ಮಾಡಬಹುದೇ? ಮಹಾ ಪತಿವ್ರತೆಯಾದ ಸಕಲ ಲೋಕೋಪಕಾರಿಯಾದ ಹಿರಣ್ಯಕಶಿಪುವಿನ ಹೆಂಡತಿಯನ್ನು ಕೈ ಶೆರೆ ಹಿಡಿದು ಕೊಂಡು ಬಂದದ್ದು ಬಹಳ ತಪ್ಪು ಕೆಲಸವಾಯಿತು. ಇದು ಅಲ್ಲದೆ, ಈ ಮಹಾತ್ಮಳ ಹೊಟ್ಟೆಯಲ್ಲಿ ಪರಮ ವೈಷ್ಣವ ಶಿಖಾಮಣಿಯು ಇರುವನು. ಆತನು ಹುಟ್ಟಿ, ಆ ಹಿರಣ್ಯಕಶಿಪುವನ್ನು ಕೊಲ್ಲಿಸಿ, ನಿಮ್ಮ ನಿಮ್ಮ ಪದವಿಗಳು ನಿಮಗೆ ಯಥಾ ಪ್ರಕಾರವಾಗುವ ಹಾಗೆ ಮಾಡಿ, ಸರ್ವ ಲೋಕಗಳನ್ನು ಸಂತೋಷ ಪಡಿಸುವನು. ಆದ್ದರಿಂದ ಈ ಮಹಾ ಪತಿವ್ರತೆಯನ್ನು ನೀನೇ ಹಿಂತಿರುಗಿ ಕರೆದು ಕೊಂಡು ಹೋಗಿ, ಅವಳ ಅಂತಃಪುರದಲ್ಲಿ ಬಿಟ್ಟು ಬಾ, ಎಂದು ಹೇಳಿದನು. ದೇವೇಂದ್ರನು ನಾರದ ಮುನಿಯ ಮಾತಿಗೆ ಒಡಂಬಟ್ಟು, ಆಕೆಯನ್ನು ಪಾಲಕಿಯಲ್ಲಿ ಕೂರಿಸಿ ಕೊಂಡು, ಬಹಳ ಮರ್ಯಾದೆಯಿಂದ ಕರೆದು ಕೊಂಡು ಬಂದು, ಆ ಪಟ್ಟಣದಲ್ಲಿ ಆಕೆಯ ಅಂತಃಪುರದಲ್ಲಿ ಬಿಟ್ಟು, ತನ್ನ ಅಮರಾವತೀ ಪಟ್ಟಣಕ್ಕೆ ಹೊರಟು ಬಂದನು. ಅಷ್ಟರೊಳಗೆ ದೇವತೆಗಳಿಂದ ಪರಾಜಿತರಾದ ಹಿರಣ್ಯಕಶಿಪುವಿನ ಮಂತ್ರಿಗಳು ಹಿಮವತ್ಪರ್ವತಕ್ಕೆ ಓಡಿ ಹೋಗಿ, ತಪಸ್ಸನ್ನು ಮಾಡುತ್ತಿರುವವನನ್ನು ಕಂಡು,—ದೇವತೆಗಳು ಬಂದು, ತಮ್ಮನ್ನೆಲ್ಲಾ ಜೈಸಿ, ಪಟ್ಟದ ರಾಣಿಯನ್ನು ಕೈ ಶೆರೇ ಹಿಡಿದು ಕೊಂಡು ಹೋದರು ಎಂದು ಹೇಳಲು; ಹಿರಣ್ಯಕಶಿಪುವು ಪ್ರಳಯ ಕಾಲದ ಭೈರವನಂತೆ ರೌದ್ರಾಕಾರನಾಗಿ—ಸಕಲ ದೇವ

ಸಮೂಹಗಳನ್ನು ಸುಟ್ಟು, ಬೂದೀ ಮಾಡಿ, ಹಣೆಗೆ ಹಚ್ಚಿಸಿ ಕೊಳ್ಳುವೆನು
ಎಂದು, ತಪಸ್ಸನ್ನು ಬಿಟ್ಟು, ತನ್ನ ಶೋಣಿತ ಪುರದ ಸಮೀಪಕ್ಕೆ ಬರುವಷ್ಟರಲ್ಲಿ
ಯೇ, ಆ ಹಿರಣ್ಯಕಶಿಪುವಿನ ಹೆಂಡತಿಯು ಕೋಟಿ ಸೂರ್ಯ ಪ್ರಕಾಶವಾದ
ಗಂಡು ಮಗುವನ್ನು ಹೆರಲು; ಲೋಕೋಪಕಾರಿಯಾದ ಹರಿ ಭಕ್ತನು ಹುಟ್ಟಿ
ದನೆಂದು ಬಹಳ ಸಂತೋಷದಿಂದ ಇಂದ್ರಾದಿ ದೇವತೆಗಳು ದೇವ ದುಂದುಭಿ
ಯನ್ನು ಬಾರಿಸಿದರು; ಗಂಧರ್ವರು ಗಾನವನ್ನು ಮಾಡಿದರು; ಅಪ್ಸರ ಸ್ತ್ರೀಯ
ರು ನರ್ತನವನ್ನು ಮಾಡಿದರು; ಕಲ್ಪ ವೃಕ್ಷ ಪಾರಿಜಾತಾದಿ ನಂದನ ವನದ ವೃ
ಕ್ಷಗಳ ಹೂವುಗಳ ಮಳೆಯನ್ನು ಸುರಿಸಿದರು.

ಇದನ್ನೆಲ್ಲಾ ಪಟ್ಟಣಕ್ಕೆ ಬರುವ ಹಿರಣ್ಯಕಶಿಪುವು ಕಂಡು,—ಇಷ್ಟು ಸಂಭ್ರ
ಮವು ದೇವತೆಗಳಿಗೆ ಆಗುವದಕ್ಕೆ ಕಾರಣವೇನೆಂದು ಯೋಚಿಸುತ್ತ ಇರು
ವಲ್ಲಿ, ದೇವೇಂದ್ರನು ಅಷ್ಟದಿಕ್ಪಾಲಕರೊಡನೆ ಕೂಡಿ, ಆತನ ಎದುರಿಗೆ ಬಂದು,
ದೇವ ಲೋಕದ ವಸ್ತುಗಳನ್ನು ಕೈ ಗಾಣಿಕೇ ಒಪ್ಪಿಸಿ, ಕೈ ಮುಗಿದು ಕೊಂ
ಡು,—ಎಲೈ, ಸರ್ವ ಲೋಕಾಧಿರಾಜನೇ, ನಿನಗೆ ಪುತ್ರೋತ್ಸವವಾಯಿತು ಎಂಬ
ಸಂತೋಷವು ನಮಗೆ ಉಂಟಾಗಿ, ಈ ಪ್ರಕಾರ ನಾವು ನಡ ಕೊಂಡೆವು ಎಂದು
ಬಿನ್ನವಿಸಿದರು. ಆ ಮಾತನ್ನು ಹಿರಣ್ಯಕಶಿಪುವು ಕೇಳಿ, ದೇವತೆಗಳ ಮೇಲೆ
ಇದ್ದ ಕೋಪವೆಲ್ಲಾ ಶಾಂತವಾಗಿ, ಪುತ್ರೋತ್ಸವದ ಸಂತೋಷದಿಂದ ಆ ಇಂದ್ರಾ
ದಿಗಳೊಡನೆ ಕೂಡಿ, ಪಟ್ಟಣವನ್ನು ಹೊಕ್ಕು, ಅಂತಃಪುರಕ್ಕೆ ಹೋಗಿ, ದಿವ್ಯ
ತೇಜಃ ಪುಂಜನಾದ ಮಗನನ್ನು ನೋಡಿ, ಅತ್ಯಾಶ್ಚರ್ಯ ಪಟ್ಟು, ತನ್ನ ಸೆರೆ ಮನೆ
ಯಲ್ಲಿ ಇಟ್ಟಿದ್ದ ಸರ್ವ ಜನರನ್ನು ಬಿಡಿಸಿ, ಸಕಲ ಜಾತಿಯವರಿಗೂ ಬೇಕಾದಷ್ಟು
ದಾನ ಧರ್ಮಗಳನ್ನು ಮಾಡಿ, ದೈತ್ಯ ಗುರುವಾದ ಶುಕ್ರಾಚಾರ್ಯನನ್ನು ಕರಿಸಿ,
ಹುಟ್ಟಿದ ಮಗುವಿಗೆ ಜಾತ ಕರ್ಮವನ್ನು ಮಾಡಿ, ಹನ್ನೆರಡನೇ ದಿವಸದಲ್ಲಿ,
ಸಕಲ ಲೋಕಾಹ್ಲಾದಕರನಾಗಿ ಹುಟ್ಟಿದ್ದರಿಂದ, ಶುಕ್ರಾಚಾರ್ಯನಿಂದ ಪ್ರಹ್ಲಾದ
ನೆಂದು ನಾಮ ಕರಣವನ್ನು ಮಾಡಿಸಿದನು.

ಆ ಪ್ರಹ್ಲಾದನು ಗರ್ಭದಲ್ಲಿಯೇ ಹರಿ ಭಕ್ತಿ ರಸ ಮಯವಾದ ದೇಹವುಳ್ಳ
ವನಾದ್ದರಿಂದ, ಭೂಮಿಯಲ್ಲಿ ಜನಿಸಿದಾಗ್ಯೂ, ಅಜ್ಞಾನವನ್ನು ಹೊಂದದೆ, ಆ ಶಿಶು
ತ್ವದಲ್ಲಿಯೂ ಹರಿ ಧ್ಯಾನ ಪರಾಯಣನಾಗಿ, ತಾಯಿಯ ಮೊಲೆ ಹಾಲನ್ನು ಹರಿ
ಪಾದ ತೀರ್ಥವೆಂದೇ ಭಾವಿಸಿ, ಕುಡಿಯುತ್ತ, ಹರಿಗೆ ಈ ಪ್ರಕಾರ ಅಡ್ಡ ಬೀಳ
ಬೇಕೆಂದು ತೊಟ್ಲಿನಲ್ಲಿ ಮಗುಚಿ ಕೊಳ್ಳುತ್ತ,—ಹರಿಗೆ ಅರ್ಪಿಸದೆ, ಹಾಲು,
ತುಪ್ಪ, ಸಕ್ಕರೆಗಳನ್ನು ಕೈ ಹಿಡಿದು, ಬಲಾತ್ಕಾರದಿಂದ ತಿನ್ನಿಸುತ್ತಾರಲ್ಲ ಎಂಬ

ದುಃಖದಿಂದ ಅಳುತ್ತ, ಹರಿಯ ಮಹಾತ್ಮೆಯನ್ನು ಮನದಲ್ಲಿ ನೆನದು, ನೆನದು, ನಗುತ್ತ, ಕಣ್ಣು ಮುಚ್ಚಿ, ನಿದ್ದೆ ಹೋಗುವಂತೆ ತದೇಕ ಚಿತ್ತನಾಗಿ, ಹರಿಯ ಧ್ಯಾನವನ್ನು ಮಾಡುತ್ತ, ಹರಿಯ ಮಂದಿರಕ್ಕೆ ಹೋಗ ಬೇಕೆಂದು ದಟ್ಟಡಿಗಳನ್ನು ಇಡುತ್ತ, ಹರಿಯ ನಾಮಗಳನ್ನು ಸದಾ ಹೇಳ ಬೇಕೆಂದು ತೊದಲು ನುಡಿಗಳನ್ನು ಆಡುತ್ತ, ಸರಿ ಹುಡುಗರೊಡನೆ ಆಡುವದಕ್ಕೆ ಹೋಗಿ, ಅವರೊಡನೆ ಚಂಡು, ಬುಗುರಿ, ಗಜ್ಜುಗ, ಹಿಳ್ಳೇ ಕೋಲು ಮುಂತಾದ ಕೆಟ್ಟ ಆಟಗಳನ್ನು ಆಡದೆ, ತುಲಸೀ ಗಿಡಗಳು ಇರುವ ಬಳಿಗೆ ಹೋಗಿ, ದಶಿಯಿಂದ ಅವುಗಳಿಗೆ ಗುಣಿಸೆದೇ ಮಾಡಿ, ಪಾತೀ ಕಟ್ಟಿ, ನೀರನ್ನು ಹೊಯಿದು, ಬಲಗೊಂಡು, ನಮಸ್ಕರಿಸಿ, ಅವುಗಳ ಮುಂದೆ ಸಂತೋಷದಿಂದ ಕುಣಿದಾಡುತ್ತ, ಈ ಪ್ರಕಾರ ಐದು ವರುಷದ ವರಿಗೂ ಲೀಲೆಯಿಂದ ಬೆಳೆದನು.

ತರುವಾಯ ಮಗನನ್ನು ನೋಡಿ, ಹಿರಣ್ಯಕಶಿಪುವು ತಬ್ಬಿ ಕೊಂಡು ಮುಂಡಾಡಿ,—ಇವನಿಗೆ ಓದು ಬರಹಾ ಕಲಿಯುವ ಕಾಲವಾಯಿತೆಂದು ತಿಳದು, ಶುಕ್ರಾಚಾರ್ಯನನ್ನು ಕರಿಸಿ, ಒಳ್ಳೇ ದಿವಸದಲ್ಲಿ, ಒಳ್ಳೇ ಲಗ್ನದಲ್ಲಿ, ಹಣ್ಣು, ಕಾಯಿ, ಕಜ್ಜಾಯಗಳ ರಾಶಿಯನ್ನು ಊರಗಲಕ್ಕೆ ಸುರಿಸಿ, ಬೆನಕನ ಪೂಜೆಯನ್ನು ಮಾಡಿಸಿ, ಗುರುವಾದ ಶುಕ್ರಾಚಾರ್ಯನ ವಶಕ್ಕೆ ಮಠದಲ್ಲಿ ಓದುವದಕ್ಕೆ ಕಳುಹಿಸಿ ಬಿಟ್ಟನು. ಆ ಮೇಲೆ ಶುಕ್ರಾಚಾರ್ಯನು ಈ ಪ್ರಹ್ಲಾದನಿಗೆ ನೆಲ ಪಳ್ಳಿಯ ಮೇಲೆ ಓಂನಮಶ್ಶಿವಾಯ ಎಂಬ ಅಕ್ಷರಗಳನ್ನು ಬರೆದು, ಇವನ ಕೈ ಹಿಡಿದು ಕೊಂಡು, ಹತ್ತೆಂಟು ವೇಳೆ ತಿದ್ದಿಸಿ,—ಎಲ್ಲಿ? ನೋಡೋಣ, ನೀನೇ ಬರೆ ಎಂದು ಹೇಳುವದು; ಈ ಪ್ರಹ್ಲಾದನು—ಸರಸಿಜಾಂಬಕ, ವಿಷ್ಣು, ದಾಮೋದರ, ಲಕ್ಷ್ಮೀಶ, ಪೀತಾಂಬರ, ಮುರಾರಿ, ಶೌರಿ, ಹರಿ, ನಾರಾಯಣ, ಅಸುರಾರಿ, ಹೃಷೀಕೇಶ, ಗರುಡ ವಾಹನ, ಕೃಷ್ಣ, ವಿಶ್ವಂಭರ, ಜನಾರ್ದನ, ಎಂದು ಬರೆದು, ಸಂತೋಷದಿಂದ ಓದುತ್ತಾ ಇದ್ದನು. ಶುಕ್ರಾಚಾರ್ಯನು ಅದನ್ನು ಕಂಡು—ಓಹೋ! ಇನ್ನೇನು ಗತಿ? ಹೀಗೆ ಬರೆಯುವದನ್ನು ಇವನ ಅಪ್ಪ ಕಂಡರೆ—ಏನೂ ಅರಿಯದ ಹುಡುಗನಿಗೆ ಈ ಮಾರಿ ಗುರುವು ನನಗೆ ಹಗೆಯಾದ ವಿಷ್ಣುವಿನ ಹೆಸರುಗಳನ್ನು ಬರೆದೋದ ಕಲಿಸಿದನು ಎಂದು, ನನ್ನನ್ನು ಸುಮ್ಮಗೆ ಬಿಡನು ಎನುತ್ತ,—ಹೀಗೆ ಬರೆಯ ಬೇಡ! ಚನ್ನಾಗಿ ಬರೆ, ಎಂದು ಅದ್ದರಿಸಿ, ಪ್ರಹ್ಲಾದನಿಗೆ ಹೇಳಲು; ಮತ್ತೆ ಪ್ರಹ್ಲಾದನು ಮಳಲಲ್ಲಿ ಹರಿಯ ಮೂರ್ತಿಯನ್ನು ಬರೆದು, ನೋಡಿ, ನಲಿಯುತ್ತ ಇರಲು; ಶುಕ್ರಾಚಾರ್ಯನು—ಇದು ಬೇಡ ಎಂದು ಹೇಳಿ, ಮಗ್ಗಿಯನ್ನು ಬರೆದು, ಇದನ್ನು ಕೂಡಿ, ಕಳೆ, ಎಂದು ಹೇಳಲು; ಪ್ರಹ್ಲಾ

ದನು ಹರಿಯನ್ನು ಮನಸ್ಸಿನಲ್ಲಿ ಕೂಡಿ, ಸಕಲ ದುಷ್ಕೃತಗಳನ್ನು ಕಳೆಯುತ್ತ, ಅಂತರಂಗದಲ್ಲಿ ಹರಿಯನ್ನೇ ಧ್ಯಾನಿಸುತ್ತ, ಹೊರಗಣ ವ್ಯಾಪಾರಗಳನ್ನು ತೊರೆದು, ಸುಮ್ಮನಿದ್ದನು.

ಅದನ್ನು ನೋಡಿ, ಶುಕ್ರಾಚಾರ್ಯನು—ಈ ಹುಡುಗ ಯಾಕೆ ಹೀಗೆ ಮಂಕಾದನು? ಹಸಿದನೋ? ಏನೋ? ಉಂಡು ಬರಲಿ; ಮನೆಗೆ ಕಳುಹಿಸಿ ಬನ್ನಿ ಎಂದು, ಅವನ ಜೊತೇ ಹುಡುಗರ ಕೂಡಲಿಟ್ಟು, ಕಳುಹಿಸಲು; ಪ್ರಹ್ಲಾದನು ಆ ಹುಡುಗರ ಜೊತೆಯಲ್ಲಿ ಕಾಲು ಗೆಜ್ಜೆಗಳು ಉಲಿಯಲು; ಕೆಂಗುರುಳುಗಳು ಕುಣಿದಾಡಲು; ಮಾಗಾಯಿ ಹುಲಿ ಉಗುರುಗಳು ಒಲದಾಡಲು; ನಳಿ ತೋಳುಗಳನ್ನು ಆಡಿಸುತ್ತ ಬರುವದನ್ನು ದೂರದಲ್ಲಿ ಹಿರಣ್ಯಕಶಿಪುವು ಕಂಡು, ಹಿಗ್ಗಿಬಗ್ಗಾಬರಿಯಾಗಿ—ಎನ್ನ ಕಂದಾ, ಎನ್ನ ಮುದ್ದಾನೆಯೇ, ಎನ್ನ ವಂಶೋದ್ಧಾರಕನೇ, ಬಾ ಎಂದು ಕೈ ನೀಡಿ, ಕರೆದು, ಅಪ್ಪಿ ಕೊಂಡು, ಮುಂಡಾಡಿ,—ನಿನಗೆ ಗುರುಗಳು ಏನು ತಿಳಿಸಿದರು? ಯಾವ ವಿದ್ಯವನ್ನು ಕಲಿಸಿದರು? ನೀನು ಏನು ಕಲಿತೆ? ಹೇಳು; ನೋಡೋಣ, ಎಂದು ಕೇಳಲು; ಪ್ರಹ್ಲಾದನು—ಹರೇ, ಹರೇ, ಶರಣು, ಶರಣು! ಎಂದು ಬರೆದು ಓದಲು; ಹಿರಣ್ಯಕಶಿಪುವು ಕೇಳಿ, ಬೆದರಿ, ಭಯ ಪಟ್ಟು,—ಇವನಿಗೆ ಈ ಹರಿಯ ತಳ್ಳಿ ಎಲ್ಲಿಂದ ಬಂತು? ಏನೋ ಶಿಶುವು; ಅರಿಯದೆ ಬರೆದು ಓದಿದನು. ಇದಕ್ಕೇನು? ಈ ಬುದ್ಧಿಯನ್ನು ಬಿಡಿಸ ಬೇಕು ಎಂದು, ಪ್ರಹ್ಲಾದನನ್ನು ಕುರಿತು—ಎಲೈ, ಮಗನೇ, ನೀನ್ಯಾರು? ಹರಿ ಯಾರು? ಆ ಹರಿಯು ನಮಗೆ ಹಗೆಯು. ದೇವತೆಗಳ ಮಾತನ್ನು ಕೇಳಿ, ಹಂದಿಯ ರೂಪನ್ನು ತಾಳಿ, ನಿನ್ನ ಚಿಕ್ಕಪ್ಪನನ್ನು ಕೊಂದು ಹಾಕಿದ ದುರಾತ್ಮನು. ಅವನನ್ನು ಹೊಗಳುವರೇ? ಬೇಡ, ಬೇಡ, ಅಪ್ಪಾ! ಎಂದು ಹೇಳಿದನು.

ಆ ಮಾತನ್ನು ಕೇಳಿ, ಪ್ರಹ್ಲಾದನು—ಎಲೈ, ತಂದೆಯೇ, ಕೇಳು. ಹರಿಗೆ—ಇವರು ಹಗೆಗಳು, ಇವರು ಬಂಧು ಬಳಗಗಳು ಎಂಬ ಭೇದಗಳೊಂದೂ ಇಲ್ಲ. ಆತನು ದಯಾಂಬುಧಿಯು. ನಿನ್ನನ್ನು ಹಗೆ ಮಾಡಿ, ನಿನ್ನ ತಮ್ಮನನ್ನು ಕೊಂದನೆಂದು ತಿಳಿಯ ಬೇಡ. ಅವನ ಪುರಾಕೃತವಾದ ಪಾಪದ ಫಲದಿಂದ ಅವನು ಅಳಿದನು. ನೀನು ಚನ್ನಾಗಿ ತಿಳಿದು ನೋಡು, ಎಂದು ಹೇಳಿದನು. ಅದಕ್ಕೆ ಹಿರಣ್ಯಕಶಿಪುವು ಕೋಪಿಷ್ಠನಾಗಿ—ಇವನಿಗೆ ಎಷ್ಟು ಹೇಳಿದರೂ, ನನ್ನ ಹಗೆಯಾದ ಹರಿಯ ನೆನೆಯುವದನ್ನು ಬಿಡುವದಿಲ್ಲ. ಇಂಥ ಕೆಟ್ಟ ಮಗ ಇದ್ದೇನು ಫಲ? ಇವನ ಕುತ್ತಿಗೆಯನ್ನು ಕಡಿದು ಹಾಕುವೆನು ಎಂದು, ಕತ್ತಿಯನ್ನು ಹಿರಿದು, ಕಡಿಯುವದಕ್ಕೆ ಹೋಗಲು; ಗುರುವಾದ ಶುಕ್ರಾಚಾರ್ಯನು ಬೇಗ ಬಂದು,

ಹಿರಣ್ಯಕಶಿಪುವಿನ ಕೈಯನ್ನು ಹಿಡು ಕೊಂಡು,–ಬೇಡ! ಬೇಡ! ಬೇಡ! ಕೋಡಗನನ್ನು ಕೊಂದರೇನುಂಟು? ಮಗುವಿನ ಕೂಡೆ ನಿನಗೆ ಛಲವೇ? ಬಿಡು! ಇವನನ್ನು ಮುದ್ದಿಸು. ಲೋಕ ಮೆಚ್ಚುವಂತೆ ಇವನಿಗೆ ವಿದ್ಯ ಬುದ್ಧಿಯನ್ನು ನಾನು ಕಲಿಸುವೆನು ಎಂದು ಹೇಳಿ, ಸಮದಾಯಿಸಿದನು. ಆಗ ಹಿರಣ್ಯಕಶಿಪುವು ಶಾಂತನಾಗಿ, ಪ್ರಹ್ಲಾದನನ್ನು ಗುರುವಿನ ಕೈಯಲ್ಲಿ ಕೊಟ್ಟು,–ಹರಿಯನ್ನು ನೆನೆಯುವ ಇವನ ಹುಚ್ಚುತನವನ್ನು ಬಿಡಿಸಿ, ವಿದ್ಯ ಬುದ್ಧಿಗಳನ್ನು ಕಲಿಸು ಎಂದು ನೇಮಿಸಿದನು.

ತಿರಿಗಿ ಶುಕ್ರಾಚಾರ್ಯನು ಪ್ರಹ್ಲಾದನನ್ನು ಮಠಕ್ಕೆ ಕರೆದು ಕೊಂಡು ಬಂದು, ಎಷ್ಟೆಷ್ಟು ಉಪಾಯಗಳಿಂದ ಒಡಂಬಡಿಸಿ–ಹರಿಯು ನೆನೆಯುವದನ್ನು ಬಿಡು ಎಂದು ಹೇಳಿದಾಗ್ಯೂ, ಕೇಳದೆ, ಪ್ರಹ್ಲಾದನು ಹರಿ ಧ್ಯಾನ ಪರನಾಗಿ ಇರುವದನ್ನು ಬಿಡದೆ, ಗುರುವಿಗೇನೇ ವೇದಾಂತವನ್ನು ಉಪದೇಶಿಸುತ್ತ, ಬುದ್ಧಿಯನ್ನು ಹೇಳುತ್ತ ಬಂದದರಿಂದ ಆತನು ಛಳಿತು, ಆ ಪ್ರಹ್ಲಾದನನ್ನು ಕರೆದು ಕೊಂಡು, ಹಿರಣ್ಯಕಶಿಪುವಿನ ಬಳಿಗೆ ಬಂದು–ಈ ನಿನ್ನ ಮಗನು ನಾನು ಎಷ್ಟು ವಿಧದ ಒಳ್ಳೇ ಮಾತಿನಲ್ಲಿ ಹೇಳಿದಾಗ್ಯೂ, ನಾನಾ ವಿಧದಲ್ಲಿ ಹೊಡೆದು, ಬಡಿದು, ಬೈದಾಗ್ಯೂ, ಹರಿಯ ಧ್ಯಾನವನ್ನು ಒಂದು ಕ್ಷಣವಾದರೂ ಬಿಡದೆ, ನಾನು ಹೇಳಿ ಕೊಟ್ಟದ್ದು ಒಂದನ್ನೂ ಓದಿ ಬರೆಯುವದಿಲ್ಲ. ಇವನನ್ನು ತಿದ್ದುವದಕ್ಕೆ ನನ್ನಿಂದ ಖಂಡಿತವಾಗಿ ತೀರದು, ಎಂದು ಹೇಳಿದನು. ಆ ಮಾತನ್ನು ಪ್ರಹ್ಲಾದನು ಕೇಳಿ–ಎಲೈ, ತಂದೆಯೇ, ಪರಾತ್ಪರನಾದ ಸಕಲ ದೇವೋತ್ತಮನಾದ ಹರಿಯು ನನ್ನ ಹೃದಯಾರವಿಂದದ ಕರ್ನಿಕಾ ಮಧ್ಯದಲ್ಲಿ ಸದಾಕಾಲದಲ್ಲಿಯೂ ನೆಲೆಗೊಂಡಿರುವಲ್ಲಿ, ಈ ಕೆಟ್ಟ ಗುರುವು ನನಗೆ ಹೇಳಿ ಕೊಡುವದೇನು? ನಾನು ಕಲಿಯುವದೇನು? ನನಗೆ ತಂದೆಯೂ, ತಾಯಿಯೂ, ಗುರುವೂ, ಬಂಧು ಬಳಗವೂ, ಸ್ನೇಹಿತನೂ, ಸಕಲ ಐಶ್ವರ್ಯವೂ, ಶ್ರೀ ಹರಿಯೇ ಆಗಿರುವಲ್ಲಿ, ಅನ್ಯರ ಸ್ನೇಹದಿಂದಲೂ, ದ್ವೇಷದಿಂದಲೂ, ಸ್ವಲ್ಪವಾದರೂ ಪ್ರಯೋಜನವಿಲ್ಲ. ನನಗೆ ಒಬ್ಬರ ಲಕ್ಷ್ಯವು ಇಲ್ಲವೆಂದು, ಖಂಡಿತವಾಗಿ ಹೇಳಿದನು.

ಅದನ್ನು ಕೇಳಿ, ಹಿರಣ್ಯಕಶಿಪುವು ಕೋಪಿಷ್ಠನಾಗಿ, ಕಟಕರನ್ನು ಕರಿಸಿ,–ಈ ಹುಡುಗನನ್ನು ಸ್ಮಶಾನಕ್ಕೆ ಕರೆದು ಕೊಂಡು ಹೋಗಿ, ಕಡಿದು ಹಾಕಿ ಬನ್ನಿ ಎಂದು ಅಪ್ಪಣೇ ಕೊಡಲು; ಆ ಕಟಕರು ಈ ಪ್ರಹ್ಲಾದನನ್ನು ಹಿಡಿದು ಕೊಂಡು, ಕಾಡ ಪುರಕ್ಕೆ ಕರೆದು ಕೊಂಡು ಹೋಗಿ, ಅಲ್ಲಿಯೂ ಎಡೆ ಬಿಡದೆ ಹರಿನಾಮ ಸ್ಮರಣೆಯನ್ನು ಮಾಡುತ್ತಲಿರುವ ಪ್ರಹ್ಲಾದನನ್ನು ಸಕಲ ಆಯುಧಗಳಿಂ

ದ ಕಡಿದು, ತಿವಿದಾಗ್ಯೂ, ಆ ಆಯುಧಗಳೇ ತುಂಡು ತುಂಡಾಗಿ ತುಮುರು ತುಮುರಾಗಿ ಹೋದದ್ದಲ್ಲದೆ, ಇವನ ಮೈಗೆ ಸ್ವಲ್ಪವಾದರೂ ಘಾಯವಾಗದೆ ಇದ್ದದರಿಂದ, ಆ ಕಟಕರು ಆಶ್ಚರ್ಯ ಪಟ್ಟು, ಈ ಸುದ್ದಿಯನ್ನು ಹಿರಣ್ಯಕಶಿಪುವಿಗೆ ತಿಳಿಸಲು; ಆತನು—ಹಗೆಯಾದ ಹರಿಯೇ ಈ ಮಗನ ಸ್ವರೂಪವಾಗಿರ ಬೇಕು. ಇವನನ್ನು ಕೊಂದರೆ, ಹರಿಯನ್ನೇ ಕೊಂದ ಹಾಗೆ ಆಗುತ್ತದೆ ಎಂದು ನಿಶ್ಚೈಸಿ—ಇವನ ಕೈ ಕಾಲು ಕಟ್ಟಿ, ಸಮುದ್ರದಲ್ಲಿ ಹಾಕಿ ಎಂದು ನೇಮಿಸಿದನು. ಅವರು ಅದೇ ಪ್ರಕಾರ ಸಮುದ್ರದಲ್ಲಿ ಹಾಕಲು; ಸಮುದ್ರ ರಾಜನು ಪ್ರತ್ಯಕ್ಷವಾಗಿ ಬಂದು, ಪರಮ ಭಾಗವತನಾದ ಪ್ರಹ್ಲಾದನಿಗೆ ನಮಸ್ಕರಿಸಿ, ಅನರ್ಘ್ಯವಾದ ರತ್ನಾಭರಣಗಳಿಂದ ಅಲಂಕರಿಸಿ, ತಾನೇ ಎತ್ತಿ ಕೊಂಡು ಬಂದು, ಧಡದಲ್ಲಿ ಇರುವ ಈ ಕಟಕರ ವಶಕ್ಕೆ ಕೊಟ್ಟು, ಅದೃಶ್ಯನಾದನು. ಆ ಮೇಲೆ ಕಟಕರು ಈ ಪ್ರಹ್ಲಾದನ ಮಹಾತ್ಮೆಗೆ ಬೆರಗಾಗಿ—ಇವನೇನೋ ದೈವೀಕದ ಮೊಗುವಾಗಿರ ಬೇಕೆಂದು ಎಣಿಸಿ, ಅವನನ್ನು ಕರೆದು ಕೊಂಡು, ಹಿರಣ್ಯಕಶಿಪುವಿನ ಬಳಿಗೆ ಬಂದು, ನಡೆದ ವಿವರವನ್ನು ತಿಳಿಸಿದರು. ಆತನು ಆ ಮಾತನ್ನು ಕೇಳಿ, ಮತ್ತೂ ಕೋಪಿಷ್ಠನಾಗಿ, ಆ ಕಟಕರನ್ನು ಕುರಿತು—ದೊಡ್ಡ ದೊಡ್ಡವುಗಳಾದ ಒಣಗಿದ ಮರಗಳನ್ನು ಒಟ್ಟಿ, ನಾಲ್ಕು ಕಡೆಗೂ ಬೆಂಕೀ ಹತ್ತಿಸಿ, ಅದರ ಉರಿಯಲ್ಲಿ ಇವನ ಕೈ ಕಾಲು ಕಟ್ಟಿ ಹಾಕಿ ಎಂದು ನೇಮಿಸಿ, ಕಳುಹಿಸಲು; ಅವರು ಅದೇ ಪ್ರಕಾರ ಮಾಡಿದರು. ಆಗ ಅಗ್ನಿ ದೇವತೆಯು ಕೋಟಿ ಸೂರ್ಯರ ಹಾಗೆ ಪ್ರಕಾಶಿಸುವ ಈ ಪ್ರಹ್ಲಾದನನ್ನು ಸುಡುವದಕ್ಕೆ ತನಗೆ ಶಕ್ತಿ ಸಾಲದೆ, ಬಹಳವಾಗಿ ಉಪಚರಿಸಿ, ಎತ್ತಿ ಕೊಂಡು ಬಂದು, ಈ ಕಟಕರ ವಶಕ್ಕೆ ತಿರಿಗಿ ಕೊಟ್ಟು, ಆ ಬೆಂಕಿಯಲ್ಲಿಯೇ ಹೊಕ್ಕು, ಮರಸಿ ಕೊಂಡನು.

ಈ ವರ್ತಮಾನವನ್ನು ಹಿರಣ್ಯಕಶಿಪುವಿಗೆ ಹೇಳಲು;—ಘಟ ಸರ್ಪಗಳಿಂದ ಕಚ್ಚಿಸಿ, ಕೊಂದು ಹಾಕಿ ಎಂದು ಅಪ್ಪಣೇ ಕೊಡಲು; ಆ ಕಟಕರು ದೊಡ್ಡ ದೊಡ ನಾಗರ ಹಾವುಗಳನ್ನು ಹಿಡ ತಂದು, ಈ ಪ್ರಹ್ಲಾದನ ಮೇಲೆ ಬಿಡಲು; ಹಾವುಗಳೊಂದೂ ಅವನನ್ನು ಮುಟ್ಟದೆ, ಈ ಕಟಕರನ್ನೇ ಕಚ್ಚುವದಕ್ಕೆ ಅಟ್ಟಿ ಕೊಂಡು ಬರಲು; ಅವರೆಲ್ಲರು ಹೆದರಿ, ಹಿರಣ್ಯಕಶಿಪುವಿನ ಬಳಿಗೆ ಓಡಿ ಬಂದು, ನಡೆದ ವಿವರವನ್ನು ಬಿನ್ನವಿಸಿದರು. ಅದನ್ನು ಕೇಳಿ, ಹಿರಣ್ಯಕಶಿಪುವು ಬಹಳ ಕೋಪಿಷ್ಠನಾಗಿ, ಪ್ರಹ್ಲಾದನನ್ನು ತನ್ನ ಚಾವಡಿಗೆ ಹಿಡ ತರಿಸಿ, ಅವನ ಜುಟ್ಟನ್ನು ಹಿಡಿದು ಕೊಂಡು, ಕತ್ತಿಯನ್ನು ಕಿತ್ತು ಕೊಂಡು,—ಎಲಾ, ಹಗೆಯಾದ ಮಗನೇ, ನೀನು ನೆನೆಯುವ ಹರಿಯು ಎಲ್ಲಿದ್ದಾನೆ? ಎನಲು; ಪ್ರಹ್ಲಾದನು—

ಎಲೈ, ತಂದೆಯೇ, ಸಕಲವಾದ ಲೋಕಗಳಲ್ಲಿಯೂ ಅಣು ರೇಣು ತೃಣ
ಕಾಷ್ಟಗಳಲ್ಲಿಯೂ ಪರಿಪೂರ್ಣನಾಗಿರುವ ಹರಿಯು ಎಲ್ಲಾ ಕಡೆಯಲ್ಲಿಯೂ
ಇದ್ದಾನೆ. ಅವನು ಇಲ್ಲದ ಸ್ಥಳ ಯಾವದೂ ಇಲ್ಲ, ಎನಲು; ಹಿರಣ್ಯಕಶಿಪು
ವು—ಹಾಗಾದರೆ, ನಿನ್ನ ಹರಿಯನ್ನು ಈ ನನ್ನ ಚಾವಡಿಯ ಉಕ್ಕಿನ ಕಂಭದಲ್ಲಿ
ತೋರಿಸಿದೆಯಾ? ಸರಿ! ಇಲ್ಲದೆ ಇದ್ದರೆ, ನಿನ್ನನ್ನು ಈಗಲೇ ತುಂಡು ತುಂಡಾಗಿ
ಕಡಿದು ಹಾಕುವೆನು ಎಂದು, ನಾನಾ ಪ್ರಕಾರ ಪ್ರಹ್ಲಾದನನ್ನು ಬಾಧಿಸುತ್ತಿದ್ದ
ನು. ಅದನ್ನು ನೋಡಿ, ಮಹಾ ವಿಷ್ಣುವು ಸಹಿಸಲಾರದೆ,—ಈ ಹಿರಣ್ಯಕಶಿಪುವಿಗೆ
ಬ್ರಹ್ಮ ಕೊಟ್ಟ ವರವು ತಪ್ಪದ ಹಾಗೆ, ಇವನನ್ನು ಹ್ಯಾಗೆ ಕೊಂದು ಹಾಕ
ಬೇಕು? ಎಂದು ಯೋಚಿಸಿ, ಆಗ ಕುತ್ತಿಗೆಯಿಂದ ಮೇಲಕ್ಕೆ ಸಿಂಹವಾಗಿಯೂ,
ಕೆಳಗಡೆಗೆ ಮನುಷ್ಯನಾಗಿಯೂ ಇರುವ ನರಸಿಂಹ ರೂಪನ್ನು ಧರಿಸಿ, ಆ ಚಾ
ವಡಿಯ ಉಕ್ಕಿನ ಕಂಭವನ್ನು ಎರಡು ಭಾಗವಾಗಿ ಶೀಳಿ ಕೊಂಡು, ಹೊರಗೆ
ಬರಲು; ಆ ರಭಸಕ್ಕೆ ಹಿರಣ್ಯಕಶಿಪುವು, ಕೋಟಿ ಶಿಡಿಲು ಬಡಿದ ಹಾಗೆ ಕೆಳಗೆ
ಬಿದ್ದು, ಮೂರ್ಛಿತನಾದನು. ಅಲ್ಲಿದ್ದ ಕೋಟ್ಯಾಂತರ ದೈತ್ಯ ಬಲದೊಳಗೆ
ಒಬ್ಬನಾದರೂ ಉಳಿಯದೆ, ಎಲ್ಲರೂ ನರಸಿಂಹನ ತೇಜಸ್ಸಿನಿಂದ ಸುಟ್ಟು, ಭಸ್ಮೀ
ಭೂತರಾಗಿ ಹೋದರು. ಆಗ ಪ್ರಹ್ಲಾದನು ನರಸಿಂಹನಿಗೆ ಸಾಷ್ಟಾಂಗ ನಮ
ಸ್ಕಾರವನ್ನು ಮಾಡಿ, ಕೈ ಮುಗಿದು, ನಿಂತು ಕೊಂಡು, ಅನೇಕ ವಿಧವಾದ ಸ್ತು
ತಿಗಳಿಂದ ಸ್ತೋತ್ರ ಮಾಡುತ್ತಾ ಇದ್ದನು. ಆ ಮೇಲೆ ನರಸಿಂಹನು ಹಗಲು
ರಾತ್ರಿಯಲ್ಲದ ಮುಚ್ಚಂದೇ ವೇಳೆಯಲ್ಲಿ ಆ ಹಿರಣ್ಯಕಶಿಪುವನ್ನು ಎತ್ತಿ ಕೊಂ
ಡು, ಒಳಗೂ ಹೊರಗೂ ಅಲ್ಲದ ಹೊಸ್ತಿಲ ಮೇಲೆ ಕುಳಿತು ಕೊಂಡು, ಆಕಾ
ಶವೂ ಭೂಮಿಯೂ ಅಲ್ಲದ ತನ್ನ ತೊಡೆಯ ಮೇಲೆ ಮಲಗಿಸಿ ಕೊಂಡು,
ಯಾವ ಆಯುಧಗಳೂ ಅಲ್ಲದ ತನ್ನ ಉಗುರುಗಳಿಂದ ಅವನ ಹೊಟ್ಟೆಯ
ನ್ನು ಬಗೆದು, ಕರುಳುಗಳನ್ನು ತೆಗೆದು, ವನಮಾಲಿಕೆಯನ್ನು ಹಾಕಿ ಕೊಂ
ಡನು.

ಆ ಸಮಯದಲ್ಲಿ ನರಸಿಂಹನು ಅತಿ ಕೋಪಾವೇಶದಿಂದ ರೌದ್ರಾಕಾರ
ನಾಗಿ, ಕೋಪದ ಶಿಖಿಯು ಮೂರು ಲೋಕವನ್ನು ಸುಡುತ್ತಾ ಇದ್ದಾಗ್ಯೂ,
ಶಾಂತನಾಗದೆ ಇರಲು; ಬ್ರಹ್ಮಾದಿ ಸುರರೆಲ್ಲಾ ಕೂಡಿ, ಲಕ್ಷ್ಮಿಯನ್ನು ಪ್ರಾ
ರ್ಥಿಸಿ, ನರಸಿಂಹನ ಬಳಿಗೆ ಕಳುಹಿಸಲು; ಲಕ್ಷ್ಮೀ ದೇವಿಯು ಬಂದು, ತಾನು
ಕೂಡ ನರಸಿಂಹನ ಎದುರಿಗೆ ಹೋಗುವದಕ್ಕೆ ಅಂಜಿ, ಪರಮ ಭಕ್ತನಾದ
ಪ್ರಹ್ಲಾದನನ್ನು ಮುಂದು ಮಾಡಿ ಕೊಂಡು, ಹೋಗಿ, ನರಸಿಂಹನ ಎದುರಿಗೆ
ನಿಲ್ಲಲು; ನರಸಿಂಹನು ಅವರಿಬ್ಬರನ್ನು ನೋಡಿ, ಶಾಂತನಾಗಿ, ಶೆಳೆದು ಕೊಂಡು

ತನ್ನ ಎರಡು ತೊಡೆಗಳ ಮೇಲೆ ಅವರನ್ನು ಕೂರಿಸಿ ಕೊಂಡನು. ಆಗ ಬ್ರ ಹ್ಮಾದಿಗಳು ಪುಷ್ಪ ವೃಷ್ಟಿಯನ್ನು ಕರೆದು, ನರಸಿಂಹನ ಸನ್ನಿಧಿಗೆ ಬಂದು, ಸ್ತು ತಿಸಿದರು. ಆ ಬಳಿಕ ನರಸಿಂಹನು ಬ್ರಹ್ಮಾದಿ ಸುರರೊಡನೆ ಕೂಡಿ, ಭಕ್ತನಾದ ಪ್ರಹ್ಲಾದನಿಗೆ ದೈತ್ಯ ರಾಜ ಪಟ್ಟಾಭಿಷೇಕವನ್ನು ಮಾಡಿ,—ಸ್ಥಿರ ಜೀವಿಯಾಗಿರು ಎಂದು ಹರಸಿ, ಲಕ್ಷ್ಮೀ ಸಮೇತನಾಗಿ ವೈಕುಂಠಕ್ಕೆ ತೆರಳಿದನು. ಬ್ರಹ್ಮಾದಿ ಗಳು ತಮ್ಮ ತಮ್ಮ ಲೋಕಕ್ಕೆ ಹೋದರು. ಪ್ರಹ್ಲಾದನು ಪರಮ ಭಕ್ತಿ ಯಿಂದ ಹರಿ ಧ್ಯಾನವನ್ನು ಮಾಡುತ್ತ, ಧರ್ಮದಿಂದ ರಾಜ್ಯ ಭಾರವನ್ನು ಮಾಡಿ ಕೊಂಡು, ಸುಖವಾಗಿದ್ದನು.

### 79. The Fifth or Dwarf Incarnation.

### ೭೯. ವಾಮನಾವತಾರದ ಕಥೆ.

ಅನಂತರದಲ್ಲಿ ಪ್ರಹ್ಲಾದನು ಶೋಣಿತ ಪುರದಲ್ಲಿ ಧರ್ಮದಿಂದ ರಾಜ್ಯ ಪರಿ ಪಾಲನೆಯನ್ನು ಮಾಡುತ್ತ—ಹರಿಯೇ ಪರಮೋತ್ಕೃಷ್ಟ ದೇವತೆ ಎಂದೂ, ಶರ ಣಾಗತ ರಕ್ಷಕನೆಂದೂ, ಸರ್ವ ಜಗದ್ವ್ಯಾಪಕನೆಂದೂ, ತಾನು ತಿಳಿದು, ಸಕಲ ಜನರಿಗೂ ಉಪದೇಶಾ ಮಾಡುತ್ತ ಇದ್ದು, ಬಹು ಕಾಲದ ಮೇಲೆ ರಾಜ್ಯದಲ್ಲಿ ವಿರಕ್ತನಾಗಿ—ತನ್ನ ಮೊಮ್ಮಗನಾದ ಬಲಿಯು ರಾಜ್ಯ ಭಾರಕ್ಕೆ ಯೋಗ್ಯವಾದ ಪ್ರಾಯವುಳ್ಳವನಾದನೆಂದು ತಿಳಿದು, ಆತನನ್ನು ಕರೆದು, ಏಕಾಂತದಲ್ಲಿ ಕೂರಿಸಿ ಕೊಂಡು,—ಎಲೈ, ಬುದ್ಧಿ ಶಾಲಿಯಾದ ಮೊಮ್ಮಗನೇ, ನಿನ್ನ ತಂದೆಯಾದ ವಿ ರೋಚನನು ಸಕಲ ದೈವದ ಗಂಡನಾದ ಲೋಕೈಕ ನಾಥನಾದ ವಿಷ್ಣುವಿಗೆ ದ್ರೋಹವನ್ನು ಮಾಡಿ, ಕಾಲ ಗತಿಯನ್ನು ಹೊಂದಿದನು. ನೀನು ಆ ಪ್ರಕಾರ ಮಾಡದೆ, ವಿಷ್ಣುವಿನಲ್ಲಿ ಪರಮ ಭಕ್ತಿಯನ್ನು ಇಟ್ಟು, ಸದಾ ಕಾಲದಲ್ಲಿಯೂ ಆತನ ಧ್ಯಾನವನ್ನು ಮಾಡುತ್ತ, ಧರ್ಮದಿಂದ ರಾಜ್ಯ ಪರಿಪಾಲನೆಯನ್ನು ಮಾ ಡಿ ಕೊಂಡು, ಸಕಲ ಪ್ರಾಣಿಗಳಲ್ಲಿಯೂ, ದಯವುಳ್ಳವನಾಗಿ, ಸುಖದಿಂದ ಇರು. ನಾನು ನಿನಗೆ ರಾಜ್ಯಾಭಿಷೇಕವನ್ನು ಮಾಡಿ, ತಪಸ್ಸಿಗೆ ಹೋಗುವೆನು. ಆದರೆ ದೈತ್ಯರಲ್ಲಿ ದೇವತೆಗಳಿಗೆ ಸ್ವಭಾವವಾದ ಜಾತಿ ದ್ವೇಷವು ಇರುವದರಿಂದ, ನೀ ನು ವಿಷ್ಣು ಭಕ್ತಿಯಿಂದಲೂ, ಧರ್ಮದಿಂದಲೂ, ವರ ಬಲದಿಂದಲೂ, ದೇವತೆ ಗಳನ್ನು ತಲೆ ಎತ್ತದಂತೆ ಅಡಗಿಸಿ, ಬಾಳು ಎಂದು ಬುದ್ಧಿ ಗಲಿಸಿ, ಒಳ್ಳೇ ಲಗ್ನ ದಲ್ಲಿ ರಾಜ್ಯಾಭಿಷೇಕವನ್ನು ಮಾಡಿ, ತಪಸ್ಸಿಗೆ ಹೊರಟು ಹೋದನು.

ಅನಂತರದಲ್ಲಿ ಬಲಿಯು ತನ್ನ ಸ್ವಾಧೀನವಾದ ರಾಜ್ಯ ಭಾರವನ್ನು ಮಂತ್ರಿ

ಗಳ ಮೇಲೆ ಇಟ್ಟು—ಎಳ್ಳಷ್ಟಾದರೂ ಧರ್ಮಕ್ಕೆ ಲೋಪ ಬಾರದಂತೆಯೂ, ತನ್ನ
ದೇಶದ ಸರ್ವ ಜನರು ಪರಮ ಭಕ್ತಿಯಿಂದ ವಿಷ್ಣುವನ್ನೇ ಆರಾಧಿಸುವಂತೆ
ಯೂ ಸಕಲ ಪ್ರಜೆಗಳಿಗೂ ಕಟ್ಟು ಮಾಡಿಸಿ, ನೀವು ಧರ್ಮಿಷ್ಠರಾಗಿ ವಿಚಾರಿಸಿ
ಕೊಳ್ಳುತ್ತ ಇರ್ರಿ ಎಂದು ಹೇಳಿ, ತಾನು ಹಿಮವತ್ಪರ್ವತಕ್ಕೆ ಹೋಗಿ, ಸರ್ವ ಲೋ
ಕ ಪಿತಾಮಹನಾದ ಬ್ರಹ್ಮ ದೇವರನ್ನು ಕುರಿತು ಅನೇಕ ಸಂವತ್ಸರಗಳು ತಪ
ಸ್ಸು ಮಾಡಿದ್ದರಿಂದ, ಬ್ರಹ್ಮ ದೇವರು ಮೆಚ್ಚಿ, ಆತನ ಬಳಗೆ ಬಂದು—ಎಲೈ, ಬ
ಲಿಯೇ, ನಿನ್ನ ತಪಸ್ಸಿಗೆ ನಾನು ಮೆಚ್ಚಿದೆನು. ನಿನಗೆ ಬೇಕಾದ ವರಗಳನ್ನು
ಕೇಳಿಕೋ, ಕೊಡುವೆನು ಎಂದು ಹೇಳಲು; ಬಲಿಯು ಆತನಿಗೆ ಸಾಷ್ಟಾಂಗ ಪ್ರ
ಣಾಮವನ್ನು ಮಾಡಿ, ಕೈ ಮುಗಿದು, ನಿಂತು ಕೊಂಡು,—ಸ್ವಾಮಿ, ಜಗತ್ಕರ್ತ
ನೇ, ಮೊದಲು ನನಗೆ ಎಂಥಾ ಎಡರು ಬಂದ ಕಾಲದಲ್ಲಿಯೂ ವಿಷ್ಣುವಿನಲ್ಲಿ ಭ
ಕ್ತಿಯೂ, ಧರ್ಮದಲ್ಲಿ ಬುದ್ಧಿಯೂ, ತಪ್ಪದ ಹಾಗೆ ಕೊಡ ತಕ್ಕ ವರ ಒಂದು.
ನಾನು ಆಳುವ ರಾಜ್ಯಗಳಲ್ಲಿ ಸಕಲ ಪ್ರಜೆಗಳು ಸಂತತಿ ಸಂಪತ್ತುಗಳಿಂದ ಸದಾ
ಸಂತೋಷ ಚಿತ್ತರಾಗಿ ಇರುವ ಹಾಗೆ ಕೊಡ ಬೇಕಾದ ವರ ಒಂದು. ನಾನು
ಸ್ಥಿರ ಜೀವಿಯಾಗಿ ಇರ ತಕ್ಕ ವರ ಒಂದು. ಸಕಲ ದೇವತೆಗಳು, ದಾನವರು,
ಯಕ್ಷ, ಗರುಡ, ಗಂಧರ್ವ, ಕಿನ್ನರೋರಗರು ಮುಂತಾದವರಲ್ಲಿ ಇರುವ ಮಂ
ತ್ರಾಸ್ತ್ರಗಳೂ, ವೈಷ್ಣವ ಪಾಶುಪತ ಬ್ರಹ್ಮಾಸ್ತ್ರಗಳೂ, ನನಗೆ ಸಿದ್ಧಿಸುವಂತೆ ಅ
ನುಗ್ರಹ ಮಾಡುವ ವರ ಒಂದು. ಇವುಗಳನ್ನು ದಯ ಪಾಲಿಸ ಬೇಕೆಂದು
ಬೇಡಿ ಕೊಂಡದರಿಂದ, ಬ್ರಹ್ಮ ದೇವನು ಬಹಳ ಸಂತೋಷ ಪಟ್ಟು—ಎಲೈ, ಮ
ಗನೇ, ನಿನ್ನ ಸುಗುಣಕ್ಕೆ ನಾನು ಬಹಳ ಮೆಚ್ಚಿದೆನು. ನೀನು ಕೇಳಿದ ನಾಲ್ಕು
ವರಗಳನ್ನು ನಿನಗೆ ಕೊಟ್ಟು ಇದ್ದೇನೆ. ಸುಖದಿಂದ ಬಾಳು ಎಂದು, ಆತನ ತ
ಲೆಯ ಮೇಲೆ ಕೈ ಇಟ್ಟು, ಹರಸಿ, ಹಂಸೆಯನ್ನು ಏರಿ, ಸತ್ಯ ಲೋಕಕ್ಕೆ ಹೊ
ರಟು ಹೋದನು.

ಆ ತರುವಾಯ ಬಲಿಯು ತನ್ನ ಶೋಣಿತ ಪುರಕ್ಕೆ ಬಂದು, ಆಚಾರ್ಯನಾದ
ಶುಕ್ರಾಚಾರ್ಯನಿಗೆ ಸಾಷ್ಟಾಂಗವಾಗಿ ಎರಗಿ, ಷೋಡಶೋಪಚಾರಗಳಿಂದ ಪೂ
ಜೆಸಿ, ತಾನು ಬ್ರಹ್ಮನಿಂದ ಪಡೆದು ಕೊಂಡು ಬಂದ ನಾಲ್ಕು ವರಗಳ ವಿವರಗ
ಳನ್ನು ಬಿನ್ನವಿಸಿ,—ಮುಂದೆ ನಾನು ಮಾಡುವ ಕಾರ್ಯವೇನು? ಅಪ್ಪಣೇ ಕೊಡ
ಬೇಕೆಂದು ಕೇಳಲಾಗಿ; ಶುಕ್ರಾಚಾರ್ಯನು—ಎಲೈ, ಬಲಿಯೇ, ನೀನು ಇಂಥ
ಅಮೋಘವಾದ ವರಗಳನ್ನು ಪಡೆದ ಮೇಲೆ ನೀನೇ ತ್ರಿಲೋಕಾಧಿಪತಿಯಾಗ
ಬೇಕೇ ಹೊರ್ತು, ನಿನ್ನ ಮುಂದೆ ದೇವೇಂದ್ರನು ತ್ರಿಲೋಕಾಧಿಪತಿಯಾಗಿರು

ವದೂ, ನೀನು ಆತನ ಸ್ವಾಧೀನವಾದ ಕೆಲವು ದೇಶಗಳಿಗೆ ಅರಸು ಎನ್ನಿಸಿಕೊಂಡು ಇರುವದೂ, ನಿನಗೆ ಬಹಳ ಕೊರತೆಯು; ನೀನು ಪಡೆದ ವರಗಳು ಸಫಲವಾಗದೆ ಹೋಗುವವು, ಎಂದು ಹೇಳಿದನು. ಅದನ್ನು ಕೇಳಿ,—ನೀವೇ ಇಂದ್ರ ಲೋಕಕ್ಕೆ ದಯ ಮಾಡಿ, ಮೊದಲು ಸುರ ಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಕಂಡು, ಅವರ ಪಾದಗಳಿಗೆ ನಾನು ವಂದನೇ ಮಾಡಿದ್ದಾಗಿ ಹೇಳಿ, ಈ ಮಾತುಗಳನ್ನು ತಿಳಿಸ ಬೇಕು. ಅವು ಯಾವವೆಂದರೆ,—ದೇವೇಂದ್ರನಿಗೆ ಹ್ಯಾಗೆ ನೀವು ಗುರುಗಳಾಗಿ ಮಾನ್ಯರಾಗಿದ್ದೀರೋ, ಹಾಗೆಯೇ ನನಗೂ ಗುರುಗಳಾಗಿಯೂ ಮಾನ್ಯರಾಗಿಯೂ ಇದ್ದೀರಿ. ದೇವತೆಗಳಿಗೂ ದೈತ್ಯರಿಗೂ ಆಜನ್ಮ ವೈರವು ಎಂದು ತಮಗೆ ಮನವರಿಕೆಯೇ ಇದೆ. ನಮ್ಮ ಮುತ್ತಜ್ಜನಾದ ಹಿರಣ್ಯಕಶಿಪುವು ಆಳುತ್ತ ಇದ್ದ ತ್ರಿಲೊಕಾಧಿಪತ್ಯವನ್ನು ಆತ ಸತ್ತು ಹೋದ ಮೇಲೆ, ಬಲಾತ್ಕಾರದಿಂದ ದೇವೇಂದ್ರನು ಅನುಭವಿಸುತ್ತ ಬರುತ್ತಾನೆ. ಈಗ ದೇವರ ದಯದಿಂದ ಆ ದೇವೇಂದ್ರನನ್ನು ಜೈಸಿ, ಆ ತ್ರಿಲೋಕಾಧಿಪತ್ಯವನ್ನು ಅನುಭವಿಸ ತಕ್ಕ ಶಕ್ತಿಯು ನನಗೆ ಉಂಟಾಗಿದೆ. ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳು ರಾಜ ನೀತಿಯಲ್ಲಿ ಹೇಳಿ ಇರುವವು. ಅವುಗಳೊಳಗೆ ಸಾಮೋಪಾಯವನ್ನೇ ಬುದ್ಧಿ ಶಾಲಿಗಳಾದ ಅರಸುಗಳು ಮಾಡಿ, ರಾಜ್ಯಗಳನ್ನು ಸಂಪಾದಿಸ ಬೇಕೆಂದೂ; ಅದು ತಪ್ಪಿದರೆ, ದಾನೋಪಾಯ; ಅದೂ ಸಾಗದ ಪಕ್ಷಭೇದೋಪಾಯ; ಅದೂ ನಡೆಯದೆ ಇದ್ದಲ್ಲಿ, ಕಡೆಗೆ ದಂಡೋಪಾಯವನ್ನು ಮಾಡ ತಕ್ಕದ್ದು ಎಂದೂ; ತಮ್ಮಂಥ ದೊಡ್ಡವರು ಹೇಳುವರು. ಆದ್ದರಿಂದ ಈಗ ತಮ್ಮ ಚರಣ ಸನ್ನಿಧಿಯಲ್ಲಿ ನಾನು ಬಿನ್ನವಿಸುವದೇನಂದರೆ—ದೇವೇಂದ್ರನು ತನ್ನ ಪುತ್ರ ಮಿತ್ರ ಕಳತ್ರರು ಮೊದಲಾದ ನಂಟರಿಷ್ಟರೊಡನೆ ಕೂಡಿ, ಭಗವಂತನಿಂದ ಇಂದ್ರ ಪದವಿಗೆ ನೇಮಿಸಲ್ಪಟ್ಟಿರುವ ಐರಾವತ, ವಜ್ರಾಯುಧ, ಕಲ್ಪ ವೃಕ್ಷ, ಕಾಮ ಧೇನು, ಚಿಂತಾಮಣಿ, ಮುಂತಾದ ವಸ್ತುಗಳನ್ನು ಬಿಟ್ಟು, ತನ್ನ ಸ್ವಂತವಾದ ಪದಾರ್ಥಗಳನ್ನು ತೆಗೆದು ಕೊಂಡು, ತನಗೆ ಬೇಕಾದ ಕಡೆಗೆ ಹೋಗಿ, ಸುಖವಾಗಿ ಬಾಳುವದು ಉತ್ತಮ ಪಕ್ಷವು. ಅದು ಆತನ ಮನಸ್ಸಿಗೆ ಒಡಂಬಡದೆ ಇದ್ದಲ್ಲಿ, ನನ್ನೊಡನೆ ಜಗಳಕ್ಕೆ ನಿಂತು, ತನ್ನನ್ನು ಸೇರಿದ ಜನಗಳಿಗೂ ತೊಂದರೇ ಕೊಟ್ಟು, ತಾನೂ ನನ್ನಿಂದ ಜಿತನಾಗಿ ಕಾರಾ ಗೃಹದಲ್ಲಿ ಸೇರಿ, ದುಃಖ ಪಡುವದು ಎರಡನೇ ಪಕ್ಷವು. ಈ ಎರಡು ಪಕ್ಷವನ್ನು ಇಂದ್ರನಿಗೆ ತಿಳಿಸಿ, ಆತನಿಗೆ ಸಮ್ಮತವಾದ ಪಕ್ಷವನ್ನು ನನಗೆ ಅಪ್ಪಣೇ ಕೊಟ್ಟು ಕಳುಹಿಸ ಬೇಕೆಂದು, ನಾನು ಹೇಳಿದ್ದಾಗಿ ತಿಳಿಸಿ, ಅವರ ಮನೋಭಿಪ್ರಾಯ

ವನ್ನು ನನಗೆ ಬಂದು ಅಪ್ಪಣೇ ಕೊಡ ಬೇಕೆಂದು ಹೇಳಿ, ಬಲಿಯು ಶುಕ್ರಾಚಾರ್ಯರನ್ನು ಕಳುಹಿಸಿ ಕೊಟ್ಟನು.

ಅವರು ಬಲಿಯ ನಯ ಭಯೋಕ್ತಿಗಳನ್ನು ಕೇಳಿ, ಮನಸ್ಸಿನಲ್ಲಿ ಬಹಳ ಸಂತೋಷ ಪಡುತ್ತ, ಅಮರಾವತಿಗೆ ಬಂದು, ಬೃಹಸ್ಪತ್ಯಾಚಾರ್ಯರನ್ನು ರಹಸ್ಯವಾಗಿ ಕಂಡು, ಅವರಿಂದ ಪೂಜಿತರಾಗಿ, ಬಲಿಯು ಹೇಳಿದ ಮಾತುಗಳಲ್ಲಿ ಚಾಚೂ ತಪ್ಪದಂತೆ ಎಲ್ಲಾ ಹೇಳಿದರು. ಬೃಹಸ್ಪತ್ಯಾಚಾರ್ಯರು ಆ ಮಾತುಗಳನ್ನೆಲ್ಲಾ ಕೇಳಿ, ತಮ್ಮ ಮನಸ್ಸಿನಲ್ಲಿ ಚನ್ನಾಗಿ ಪರಿಭಾವಿಸಿ ನೋಡಿ, ಶುಕ್ರಾಚಾರ್ಯರನ್ನು ಭೋಜನಾದಿಗಳಿಂದ ಸತ್ಕರಿಸುವ ಹಾಗೆ ತಮ್ಮ ಮನೆಯ ಜನಗಳಿಗೆ ನೇಮಿಸಿ, ತಾವು ಇಂದ್ರನ ಬಳಿಗೆ ಬಂದು, ಏಕಾಂತದಲ್ಲಿ ಬಲಿಯು ಶುಕ್ರಾಚಾರ್ಯರ ಬಳಿಯಲ್ಲಿ ಹೇಳಿ ಕಳುಹಿಸಿದ ಮಾತುಗಳನ್ನೆಲ್ಲಾ ಹೇಳಿದರು. ಅವುಗಳನ್ನು ಕೇಳಿ, ದೇವೇಂದ್ರನು ಬಹಳ ಚಿಂತಾಕ್ರಾಂತನಾಗಿ, ಬೃಹಸ್ಪತ್ಯಾಚಾರ್ಯರನ್ನು ಕುರಿತು—ಎಲೈ, ಆಚಾರ್ಯರೇ, ಬಲಿಯು ವರ ಬಲದಿಂದ ಬಹಳ ಬಲಿಷ್ಠನಾಗಿದ್ದಾನೆ. ಈ ವಿಷಯದಲ್ಲಿ ಹ್ಯಾಗೆ ಮಾಡ ಬೇಕೋ? ನನಗೆ ಒಂದೂ ತೋಚುವದಿಲ್ಲ. ಹೀಗೆ ನಡಿ ಎಂದು ತಾವು ಅಪ್ಪಣೇ ಕೊಟ್ಟ ಪ್ರಕಾರ ನಡಿಯುತ್ತೇನೆ, ಎಂದು ಹೇಳಿದನು. ಅದಕ್ಕೆ ಬೃಹಸ್ಪತ್ಯಾಚಾರ್ಯರು ಇಂದ್ರನನ್ನು ಕುರಿತು,—ಎಲೈ, ದೇವೇಂದ್ರನೇ, ಯಾವ ಕಾರ್ಯವನ್ನಾದರೂ ನಿಧಾನಿಸಿ ಮಾಡ ಬೇಕೇ ಹೊರ್ತು, ದುಡುಕ ಕೂಡದು, ಅಶುಭವಾದ ಕೆಲಸಗಳಿಗೆ ಕಾಲ ಹರಣವನ್ನು ಮಾಡಿ, ನೋಡ ಬೇಕೆಂದು, ನೀತಿ ಉಂಟು. ಒಂದು ತಿಂಗಳಲ್ಲಿ ಪ್ರತ್ಯುತ್ತರವನ್ನು ಹೇಳಿ ಕಳುಹಿಸುತ್ತೇವೆಂದು, ಶುಕ್ರಾಚಾರ್ಯರಿಗೆ ಹೇಳಿ, ಕಳುಹಿಸಿ ಬಿಟ್ಟು, ತಿರಿಗಿ ಬರುತ್ತೇನೆ. ಆ ಮೇಲೆ ಮುಂದೆ ಆಗ ತಕ್ಕ ಕೆಲಸಕ್ಕೆ ತಕ್ಕ ಯೋಚನೆಯನ್ನು ಮಾಡಿ, ನೋಡುವ, ಎಂದು ಹೇಳಿ, ತಿರಿಗಿ ಮನೆಗೆ ಬಂದು, ಭೋಜನಾದಿಗಳಿಂದ ಸತ್ಕೃತರಾಗಿ, ಕುಳಿತು ಕೊಂಡಿರುವ ಶುಕ್ರಾಚಾರ್ಯರನ್ನು ಕಂಡು,—ಬಲಿಯು ತಮ್ಮ ಸಂಗಡ ಹೇಳಿ ಕಳುಹಿಸಿದ ಮಾತಿಗೆ ಒಂದು ತಿಂಗಳಲ್ಲಿ ಪ್ರತ್ಯುತ್ತರ ಕೊಡುತ್ತೇನೆಂದು, ಇಂದ್ರನು ಹೇಳಿದನೆನಲು; ಶುಕ್ರಾಚಾರ್ಯರು ಬಲಿಯ ಬಳಿಗೆ ಹೋಗಿ, ಬೃಹಸ್ಪತ್ಯಾಚಾರ್ಯರು ಹೇಳಿದ ಮಾತನ್ನು ತಿಳಿಸಲು; ಆತನು ಬಹಳ ನಿಧಾನಿಯಾದ್ದರಿಂದ,—ಹಾಗೇ ಆಗಲಿ ಎಂದು, ಒಡಂಬಟ್ಟನು.

ಇತ್ತಲಾ ಬೃಹಸ್ಪತ್ಯಾಚಾರ್ಯರು ಇಂದ್ರನನ್ನು ಕರೆದು ಕೊಂಡು, ಸತ್ಯಲೋಕಕ್ಕೆ ಹೋಗಿ, ಬ್ರಹ್ಮ ದೇವನಿಗೆ ವಂದಿಸಿ—ಸ್ವಾಮಿಾ, ಚತುರ್ಮುಖನೇ, ನೀನೇ ಒಂದು ಮನ್ವಂತರದ ವರಿಗೂ ಈ ಇಂದ್ರನು ತ್ರಿಲೋಕಾಧಿಪತ್ಯವನ್ನು

ಮಾಡಿ ಕೊಂಡಿರ ಬೇಕೆಂದು ಕಟ್ಳೇ ಮಾಡಿ, ಇಂದ್ರ ಪದವಿಯಲ್ಲಿ ಇಟ್ಟೆ. ಈಗ ನಡು ಗಾಲದಲ್ಲಿ ಬಲಿಯು ಇವನ ಇಂದ್ರ ಪದವಿಯನ್ನು ಕಿತ್ತು ಕೊಂಡು, ತಾನು ಅನುಭವಿಸ ಬೇಕೆಂದು ಹೇಳಿ ಕಳುಹಿಸಿದ್ದಾನೆ. ನಿನ್ನ ಕಣ್ಣಿನ ಮುಂದೆ ನೀನು ಮಹೋನ್ನತನಾಗಿರುವಲ್ಲಿ, ನಿನ್ನ ಆಜ್ಞೆಗೆ ಭಂಗವಾದರೆ, ಆ ಅಪಮಾನವು ನಿನಗೆ ಹೊರತು, ಇಂದ್ರನಿಗೆ ಬೇರೆ ಇಲ್ಲವಷ್ಟೆ! ಇದಕ್ಕೆ ಏನು ಅಪ್ಪಣೇ ಕೊಡುತ್ತೀ? ಎಂದು ಕೇಳಿದನು. ಆ ಮಾತನ್ನು ಚತುರ್ಮುಖ ಬ್ರಹ್ಮನು—ನಾನೇನು ಮಾಡಲಿ? ತಪಸ್ಸು ಮಾಡಿದವರು ಕೇಳಿದ ವರವನ್ನು ಕೊಡುವದು ನನ್ನ ಧರ್ಮವು. ಕೊಡುವದಕ್ಕೆ ನನಗೆ ಶಕ್ತಿ ಉಂಟೇ ಹೊರತು, ನಿಗ್ರಹಿಸುವ ಶಕ್ತಿ ನನಗೆ ಇಲ್ಲ. ಜಗದೀಶ್ವರನಾದ ಶಿವನಲ್ಲಿ ಹೋಗಿ, ಹೇಳಿ ಕೊಳ್ಳಿ. ಒಂದು ವೇಳೆ ಆತನೇನಾದರೂ ಒಂದು ಉಪಾಯದಿಂದ ನಿಮಗೆ ಸಹಾಯವನ್ನು ಮಾಡಿಯಾನು. ಹೋಗಿ, ಎಂದು ಕಳುಹಿಸಿ ಬಿಟ್ಟನು. ಆ ಮೇಲೆ ಕೈಲಾಸಕ್ಕೆ ಬಂದು, ಪರಮೇಶ್ವರನನ್ನು ಕಂಡು, ತಮಗೆ ಬಲಿ ಹೇಳಿ ಕಳುಹಿಸಿದ್ದನ್ನೂ, ತಾವು ಬ್ರಹ್ಮನಲ್ಲಿ ಹೇಳಿ ಕೊಂಡದ್ದಕ್ಕೆ ಆತನು ಹೇಳಿದ್ದನ್ನೂ ಹೇಳಿ—ಮುಂದೆ ನೀನೇನು ಅಪ್ಪಣೇ ಕೊಡುತ್ತೀ? ಎಂದು ಕೇಳಿದನು. ಈಶ್ವರನು ಅದನ್ನೆಲ್ಲಾ ಕೇಳಿ—ಅಯ್ಯೋ! ಅಯ್ಯೋ! ಆ ಬ್ರಹ್ಮನ ಹಾಗೆಯೇ ವರವನ್ನು ಕೊಡುವದಕ್ಕೆ ನಾನೂ ಬಲ್ಲೆನೇ ಹೊರ್ತು, ತಪ್ಪಿಸುವ ಉಪಾಯವು ನನಗೆ ತಿಳಿಯದು. ನಾನು, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳಿಗೆ ಪ್ರಾಪ್ತವಾದ ಆಪತ್ತುಗಳನ್ನು ಏನಾದರೂ ಒಂದು ಉಪಾಯದಿಂದ ತಪ್ಪಿಸಿ ಕಾಪಾಡುವ ಶಕ್ತನು ಶ್ರೀ ಮಹಾ ವಿಷ್ಣು ಒಬ್ಬನೇ ಹೊರ್ತು, ಇನ್ನು ಯಾರಿಂದಲೂ ತೀರದು. ಆತನ ಸನ್ನಿಧಿಗೆ ಹೋಗಿ, ಹೇಳಿ ಕೊಳ್ಳಿ ಎಂದು ಅಪ್ಪಣೇ ಕೊಟ್ಟು ಕಳುಹಿಸಿದನು. ಆ ಮೇಲೆ ಕ್ಷೀರ ಸಮುದ್ರಕ್ಕೆ ಬಂದು, ಮಹಾ ವಿಷ್ಣುವನ್ನು ಕಂಡು, ನಮಸ್ಕರಿಸಿ, ನಡೆದಿರುವ ವಿಚಾರಗಳನ್ನೆಲ್ಲಾ ಬಿನ್ನವಿಸಿ,—ಕಾಪಾಡ ಬೇಕೆಂದು ಬೇಡಿ ಕೊಂಡರು.

ಮಹಾ ವಿಷ್ಣುವು ಬೃಹಸ್ಪತ್ಯಾಚಾರ್ಯರನ್ನು ಕುರಿತು—ಎಲೈ, ಸುರ ಗುರುವೇ, ಬಲಿಯು ಮಹಾ ಧರ್ಮಿಷ್ಠನು. ಇದರ ಮೇಲೆ ನನಗೆ ಪರಮ ಭಕ್ತನು. ನನ್ನಿಂದ ಆತನ ನಿಗ್ರಹಿಸುವ ಕೆಲಸ ಎಷ್ಟು ಮಾತ್ರವು ಆಗಲಾರದು. ನೀನು ಬುದ್ಧಿವಂತನು. ನಿನಗೆ ತಿಳಿಯುವ ಉಪಾಯವು ಯಾರಿಗೂ ತಿಳಿಯದು. ನೀನೇ ಇದನ್ನು ನಿರ್ವಹಿಸ ತಕ್ಕ ಆಲೋಚನೆಯನ್ನು ಮಾಡಿ, ಇಂದ್ರನನ್ನು ಕಾಪಾಡು ಎಂದು ಹೇಳಿ, ಅದೃಶ್ಯನಾದನು. ಆ ಮೇಲೆ ಬೃಹಸ್ಪತ್ಯಾಚಾರ್ಯನು ತುಂಬಿದ ದುಖ್ಖದಿಂದ ಬಾಡಿರುವ ಮುಖವುಳ್ಳ ಇಂದ್ರನನ್ನು ಕರೆದು ಕೊಂಡು,

ಅಮರಾವತಿಗೆ ಹಿಂತಿರಿಗಿ ಬಂದು, ಇಂದ್ರನನ್ನೂ, ಆತನ ಹೆಂಡತಿಯಾದ ಶಚೀ ದೇವಿಯನ್ನೂ, ಆತನ ಮಗನಾದ ಜಯಂತನನ್ನೂ, ಈ ಮೂರು ಜನರನ್ನು ಮಾತ್ರ ಸ್ವರ್ಗದಿಂದ ಹೊರಡಿಸಿ ಕೊಂಡು ಬಂದು, ಇಂದ್ರನ ತಂದೆಯಾದ ಕಶ್ಯಪರ ಆಶ್ರಮದಲ್ಲಿ ಒಂದು ಎಡೆಯಲ್ಲಿ ಬಚ್ಚಿಟ್ಟು—ಇಲ್ಲಿ ಇರ್ರಿ; ನಾನು ಬೇಗ ಬರುವೆನು ಎಂದು ಹೇಳಿ, ಅಲ್ಲಿಂದ ಹೊರಟು, ಶೋಣಿತ ಪುರಕ್ಕೆ ಬಂದು, ಮೊದಲು ಶುಕ್ರಾಚಾರ್ಯರನ್ನು ಕಂಡು, ಅವರಿಂದ ಪೂಜಿತನಾಗಿ, ಅವರನ್ನು ಸಂಗಡ ಕರೆದು ಕೊಂಡು, ಬಲಿಯ ಬಳಿಗೆ ಬರಲು; ಆತನು ಝುಗ್ಗನೆ ಸಿಂಹಾಸನದಿಂದ ಎದ್ದು, ಎದುರಾಗಿ ಬಂದು, ಬೃಹಸ್ಪತ್ಯಾಚಾರ್ಯರಿಗೆ ವಂದಿಸಿ, ಕೈ ಕೊಟ್ಟು, ಕರೆದು ಕೊಂಡು, ಹೋಗಿ, ನವ ರತ್ನ ಖಚಿತವಾದ ಚಿನ್ನದ ಕಾಲು ಮಣೆಯ ಮೇಲೆ ಕುಳ್ಳಿರಿಸಿ, ಷೋಡಶೋಪಚಾರದಿಂದ ಪೂಜಿಸಿ, ಕೈ ಮುಗಿದು ನಿಂತು ಕೊಂಡು—ಈ ದಿವಸ ನನ್ನ ಬಳಿಗೆ ದಯ ಮಾಡಿಸಿದ್ದು—ಬಡವನ ಮನೆಗೆ ಭಾಗೀರಥಿ ಬಂದ ಹಾಗೆ ಆಯಿತು; ನಾನು ಧನ್ಯನಾದೆನು; ನನ್ನ ಕುಲ ಕೋಟಿ ಎಲ್ಲಾ ಪಾವನವಾಯಿತು ಎಂದು, ಬಹಳವಾಗಿ ಕೊಂಡಾಡಿದನು. ಅನಂತರದಲ್ಲಿ ಬೃಹಸ್ಪತ್ಯಾಚಾರ್ಯನು ಬಲಿಯನ್ನು ಕುರಿತು,—ಎಲೈ, ದೈತ್ಯ ರಾಜನೇ, ಇಂದ್ರನು ನಿನ್ನ ಸಾಮೋಕ್ತಿಗಳಿಗೆ ಸಂತೋಷ ಪಟ್ಟು, ತನ್ನ ಹೆಂಡತಿಯಾದ ಶಚೀ ದೇವಿಯನ್ನೂ ಮಗನಾದ ಜಯಂತನನ್ನೂ ಸಂಗಡ ಕರೆದು ಕೊಂಡು, ಇಂದ್ರ ಪದವಿಯ ಸಕಲ ಐಶ್ವರ್ಯವನ್ನು ನಿನಗೆ ಬಿಟ್ಟು, ಹೊರಟು ಹೋಗಿ, ಈ ಮಾತನ್ನು ನಿನಗೆ ಹೇಳಿ ಬರುವಂತೆ ನಿನ್ನ ಬಳಿಗೆ ನನ್ನನ್ನು ಕಳುಹಿಸಿದನು, ಎಂದು ಹೇಳಿದನು. ಆ ಮಾತನ್ನು ಕೇಳಿ, ಬಲಿಯು ಸಂತುಷ್ಟನಾಗಿ, ಸಕಲ ದೈತ್ಯ ರಾಜ ಬಲದೊಡನೆ ಕೂಡಿ, ಬೃಹಸ್ಪತ್ಯಾಚಾರ್ಯರನ್ನೂ ಶುಕ್ರಾಚಾರ್ಯರನ್ನೂ ಸಂಗಡ ಕರೆದು ಕೊಂಡು, ಅಮರಾವತೀ ಪಟ್ಟಣಕ್ಕೆ ಅತಿ ಸಂಭ್ರಮದಿಂದ ಬಂದನು.

ಆ ಬಳಿಕ ಬೃಹಸ್ಪತ್ಯಾಚಾರ್ಯರು ಅಗ್ನಿಯೇ ಮೊದಲಾದ ದಿಕ್ಪಾಲಕರನ್ನೂ, ವಸುಗಳು, ಮರುತ್ತುಗಳು, ಆದಿತ್ಯರು, ಮೊದಲಾದ ಸರ್ವ ದೇವತೆಗಳನ್ನೂ, ಯಕ್ಷ, ಕಿನ್ನರ, ಕಿಂಪುರುಷ, ಗರುಡ, ಗಂಧರ್ವ, ಅಪ್ಸರೋರಗ ಮುಂತಾದವರನ್ನೂ ಕರಿಸಿ, ಸುಮುಹೂರ್ತದಲ್ಲಿ ಸುಧರ್ಮೆ ಎಂಬ ಸಭೆಯಲ್ಲಿ ಇಂದ್ರನ ಸಿಂಹಾಸನದಲ್ಲಿ ಬಲಿಯನ್ನು ಕೂರಿಸಿ, ತ್ರಿಲೋಕಾಧಿಪತ್ಯಕ್ಕೆ ಪಟ್ಟಾಭಿಷೇಕವನ್ನು ಮಾಡಿ, ಬಲೀಂದ್ರನೆಂದೂ, ಬಲಿ ಚಕ್ರವರ್ತಿ ಎಂದೂ, ಹೆಸರು ಕೊಟ್ಟು, ಆಶೀರ್ವಾದವನ್ನು ಮಾಡಿದನು. ಆ ಬಳಿಕ ಸರ್ವರು ಬಲಿಚಕ್ರವರ್ತಿಗೆ ಕೈ ಗಾಣಿಕೆಯನ್ನು ಕೊಟ್ಟು, ಕಾಣಿಸಿ ಕೊಂಡರು. ಆಗ ಬಲೀಂದ್ರನು ವಶಿಷ್ಠಾದಿ ಬ್ರಹ್ಮ

ಋಷಿಗಳಿಗೂ, ನಾರದಾದಿ ದೇವ ಋಷಿಗಳಿಗೂ, ಮಹಾ ಋಷಿಗಳಿಗೂ, ರಾಜ ಋಷಿಗಳಿಗೂ, ಸಮಸ್ತ ದಿಕ್ಪಾಲರೇ ಮೊದಲಾದವರಿಗೂ, ಯಥಾ ಯೋಗ್ಯವಾಗಿ ಧನ, ಕನಕ, ವಸ್ತ್ರಾಭರಣ, ಭೋಜನ, ಗಂಧ, ಮಾಲ್ಯಾದಿಗಳಿಂದ ಸತ್ಕಾರವನ್ನು ಮಾಡಿ, ಸರ್ವ ಸಮ್ಮತಿಯಿಂದ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ಎಳ್ಳಷ್ಟಾದರೂ ಅಧರ್ಮ ನಡೆಯದಂತೆಯೂ, ನಾಲ್ಕು ಕಾಲುಗಳನ್ನು ಊರಿ, ಧರ್ಮವು ಸಂಚರಿಸುವಂತೆಯೂ, ಸರ್ವರು ವಿಷ್ಣು ಭಕ್ತರಾಗಿ ವಿಷ್ಣುವನ್ನು ಪೂಜಿಸುತ್ತ, ಇರುವಂತೆಯೂ ಕಟ್ಟು ಮಾಡಿಸಿ, ತ್ರಿಲೋಕಾಧಿಪತ್ಯವನ್ನು ಸುಖದಿಂದ ಮಾಡುತ್ತಾ ಬಂದನು. ಆ ಬಲಿ ಚಕ್ರವರ್ತಿಯು ರಾಜ್ಯ ಭಾರವನ್ನು ಮಾಡುವಲ್ಲಿ ಮೂರು ಲೋಕಗಳಲ್ಲಿಯೂ ಸಂತತಿ ಸಂಪತ್ತುಗಳು ದಿನ ದಿನಕ್ಕೆ ಹಾಲು ಉಕ್ಕುವಂತೆ ಉಕ್ಕಿದವು. ಭೂಮಿಯಲ್ಲಿ ಬಿತ್ತದೆ, ಬೆಳೆಯು ಹೆಚ್ಚಾಗಿ ಬೆಳೆಯಿತು. ಮುಗಿಲುಗಳು ಕಾಲ ಕಾಲಗಳಲ್ಲಿ ತಪ್ಪದೆ ಮಳೆಯನ್ನು ಕರೆಯುತ್ತ ಬಂದವು. ಬಡತನದ ಹುಟ್ಟೇ ಹಾಳಾಯಿತು. ಧರ್ಮದಿಂದ ಸರ್ವ ಪ್ರಜೆಗಳು ನಡೆದು ಕೊಂಡು, ಹರಿ ಭಕ್ತಿ ಪರಾಯಣರಾಗಿ ಸುಖವಾಗಿದ್ದರು.

ಅನಂತರದಲ್ಲಿ ಒಂದು ದಿವಸ ಬೃಹಸ್ಪತ್ಯಾಚಾರ್ಯರು ರಹಸ್ಯವಾಗಿ ಬಲಿ ಚಕ್ರವರ್ತಿಯ ಬಳಿಗೆ ಬಂದು, ಆತನಿಂದ ಪೂಜಿತನಾಗಿ, ಪೀಠದಲ್ಲಿ ಕುಳಿತು ಕೊಂಡು, ಅವನನ್ನು ಕುರಿತು—ನೀನು ಧರ್ಮದಿಂದ ತ್ರಿಲೋಕಾಧಿಪತ್ಯವನ್ನು ಮಾಡುವದನ್ನು ನೋಡಿ, ನನಗೆ ಬಹಳ ಸಂತೋಷವಾಯಿತು. ಇನ್ನು ಮೇಲೆ ಮಹಾತ್ಮರಾದ ಶುಕ್ರಾಚಾರ್ಯರನ್ನು ಇಟ್ಟು ಕೊಂಡು, ಸುಖವಾಗಿ ಬಾಳು. ನೀನು ಅಪ್ಪಣೇ ಕೊಟ್ಟರೆ, ನಾನು ತಪಸ್ಸಿಗೆ ಹೋಗುವೆನು; ಎಂದು ಹೇಳಲು; ಬಲಿ ಚಕ್ರವರ್ತಿಯು ವ್ಯಾಕುಲದಿಂದ ಬಹಳ ಖಿನ್ನನಾಗಿ, ಬೃಹಸ್ಪತ್ಯಾಚಾರ್ಯರನ್ನು ಕುರಿತು—ಎಲೈ, ಸುರ ಗುರುವೇ, ಶುಕ್ರಾಚಾರ್ಯರು ದೈತ್ಯರಿಗೆ ಗುರುವೇ ಹೊರ್ತು, ಇಂದ್ರ ಪದವಿಗೆ ಗುರುವಲ್ಲ. ಈ ಪದವಿಗೆ ಬಂದವರಿಗೆ ನೀವೇ ಗುರುಗಳಾಗಿ, ಸನ್ಮಾರ್ಗಗಳನ್ನು ಬೋಧಿಸುತ್ತ ಇರ ಬೇಕು. ಈಗ ನೀವು ತಪಸ್ಸಿಗೆ ಹೋಗುವದು ಹ್ಯಾಗಾದೀತು? ಬ್ರಹ್ಮಾದಿ ಸರ್ವ ದೇವತೆಗಳು ಮಹಾ ವಿಷ್ಣುವಿನಿಂದ ನಿಯಮಿಸಲ್ಪಟ್ಟ ತಮ್ಮ ತಮ್ಮ ಅಧಿಕಾರಗಳನ್ನು ಬಿಟ್ಟು ಹೋಗುವದಕ್ಕೆ ಹ್ಯಾಗೆ ಶಕ್ತರಲ್ಲವೋ, ನಿಮಗೂ ಹಾಗೆಯೇ ಮಹಾ ವಿಷ್ಣುವು ಈ ಸುರ ಗುರುತ್ವದ ಪದವಿಯನ್ನು ಕೊಟ್ಟು ಇರುವದರಿಂದ, ನೀವು ಇದನ್ನು ಬಿಟ್ಟು ಹೋಗ ಕೂಡದು, ಎಂದು ಹೇಳಿದನು. ಅದಕ್ಕೆ ಬೃಹಸ್ಪತ್ಯಾಚಾರ್ಯರು ಬಲಿ

ಚಕ್ರವರ್ತಿಯನ್ನು ಕುರಿತು—ನೀನು ಹೇಳಿದ ಮಾತು ಯುಕ್ತವೇ ಸರಿ. ಆದರೆ
ಇದರಲ್ಲಿ ಒಂದು ಕೊಂಕಿರುವದು. ಅದೇನಂದರೆ,—ನೀನು ಮಹಾ ವಿಷ್ಣುವಿನಿಂ
ದ ಆದಿಯಲ್ಲಿ ನಿಯಮಿಸಲ್ಪಟ್ಟು, ಇಂದ್ರ ಪದವಿಯನ್ನು ಅನುಭವಿಸುವವನಲ್ಲ.
ನಿನ್ನ ವರ ಬಲದಿಂದಲೂ ಧರ್ಮದಿಂದಲೂ ಸದ್ಗುಣದಿಂದಲೂ ಅನುಭವಿಸುತ್ತೀ
ಯೆ. ಆದ್ದರಿಂದ ವಿಷ್ಣುವಿನಿಂದ ನೇಮಿಸಲ್ಪಟ್ಟು, ಈ ಪದವಿಯನ್ನು ಅನುಭವಿ
ಸುತ್ತಾ ಇದ್ದ ಇಂದ್ರನು ತಪಸ್ಸಿಗೆ ಹೋದ ಮೇಲೆ ಆತನಿಗೆ ಗುರುವಾದ ನಾನು
ತಪಸ್ಸಿಗೆ ಹೋಗುವದು ಯುಕ್ತವೇ ಸರಿ. ಆದ್ದರಿಂದ ನೀನು ಅಪ್ಪಣೇ ಕೊಡ
ಬೇಕೆಂದು ಹೇಳಿ, ಒಡಂಬಡಿಸಿ, ಅಲ್ಲಿಂದ ಹೊರಟು, ಕಶ್ಯಪರ ಆಶ್ರಮಕ್ಕೆ ಬಂ
ದು, ಮೊದಲು ಕಶ್ಯಪರ ಹೆಂಡತಿಯಾದ ಅದಿತಿ ದೇವಿಯನ್ನು ಕಂಡು, ಈ ವಿ
ವರಗಳನ್ನೆಲ್ಲಾ ತಿಳಿಸಲು; ಆಕೆಯು ಮಹಾ ದುಖ್ಖಾಕ್ರಾಂತೆಯಾಗಿ, ಬೃಹಸ್ಪ
ತ್ಯಾಚಾರ್ಯರನ್ನು ಕುರಿತು—ಎಲೈ, ಬೃಹಸ್ಪತಿಯೇ, ನೀನು ನನ್ನ ಮಗನಿಗೆ ಗು
ರುವಾಗಿದ್ದು, ಅವನು ತ್ರಿಲೋಕಾಧಿಪತ್ಯವನ್ನು ಕಳೆದು ಕೊಂಡು, ಹೀಗೆ ಕಷ್ಟ
ಪಡುತ್ತಾ ಇರುವದು ನಿನಗೆ ಮಾನವೇ? ಇದಕ್ಕೆ ಮುಂದೆ ಏನು ಮಾಡ ಬೇ
ಕು? ನನಗೆ ನೀನು ಹೇಳಿದರೆ, ಆ ಪ್ರಕಾರ ನಡೆಯುವೆನು ಎಂದು ಹೇಳಲು;
ಬೃಹಸ್ಪತ್ಯಾಚಾರ್ಯರು ಅವಳು ನಡೆಯ ತಕ್ಕ ಮಾತನ್ನು ಅವಳ ಕಿವಿಯಲ್ಲಿ
ಹೇಳಿ,—ಇಂದ್ರ ಶಚಿ ಜಯಂತರೊಡನೆ ನಾನು ನಿಮ್ಮ ಆಶ್ರಮದಲ್ಲಿ ಇಂಥಾ
ಕಡೆಯಲ್ಲಿ ಇರುವೆನು ಎಂದು ಸೂಚಿಸಿ, ಅವಳ ಅಪ್ಪಣೆಯನ್ನು ತೆಗೆದು ಕೊಂ
ಡು, ಇಂದ್ರನಿರುವ ಬಳಿಗೆ ಬಂದು, ಆತನಿಗೆ ವೈಷ್ಣವ ಮಂತ್ರವನ್ನು ಉಪದೇ
ಶಿಸಿ, ಸಾರ್ವ ಕಾಲದಲ್ಲಿಯೂ ವಿಷ್ಣುವನ್ನು ಆರಾಧಿಸುವಂತೆ ನೇಮಿಸಿ, ತಾನು
ವಿಷ್ಣು ಧ್ಯಾನ ಪರನಾಗಿದ್ದನು.

ಇತ್ತಲಾ ದೇವೇಂದ್ರನ ತಾಯಿಯಾದ ಅದಿತಿ ದೇವಿಯು ಬಹಳ ದುಖ್ಖಾ
ಕ್ರಾಂತಳಾಗಿ, ಪ್ರಾತರಾಹ್ನಿಕಗಳನ್ನು ನೆರವೇರಿಸಿ, ಸುಖಾಸೀನನಾಗಿರುವ ತ
ನ್ನ ಗಂಡನಾದ ಕಶ್ಯಪ ಪ್ರಜಾಪತಿಯ ಸನ್ನಿಧಿಗೆ ಹೋಗಿ, ಅವರ ಕಾಲುಗಳ
ಮೇಲೆ ಬಿದ್ದು, ತನ್ನ ಕಣ್ಣೀರುಗಳಿಂದ ಅವರ ಅಡಿ ದಾವರೆಗಳನ್ನು ತೊಳೆದು,
ದುಖ್ಖ ಪಡುತ್ತಿರಲು; ಅದನ್ನು ಕಂಡು, ಅವರು ಕನಿಕರದಿಂದ—ಎಲೈ, ಪ್ರಾಣ
ವಲ್ಲಭೆಯೇ, ನಿನಗೇನು ಇಷ್ಟು ದುಖ್ಖ? ಹೇಳು. ನಾನು ಪರಿಹರಿಸಿ ಕೊಡುವೆ
ನು, ಎಂದು ಹೇಳಲು; ಅದಿತಿ ದೇವಿಯು ಕೈ ಮುಗಿದು, ನಿಂತು ಕೊಂಡು,—ಎ
ಲೈ, ಪ್ರಾಣ ಪ್ರಿಯನೇ, ಆಪದ್ರಕ್ಷಕನೇ, ನನಗೆ ನಿನ್ನ ಚರಣವೇ ಗತಿಯೇ
ಹೊರ್ತು, ಬೇರೆ ಗತಿ ಇಲ್ಲ. ನನ್ನ ಮಗನ ಇಂದ್ರ ಪದವಿಯನ್ನು ಬಲಿ ಎಂಬ

ದೈತ್ಯನು ಬಲಾತ್ಕಾರದಿಂದ ಕಿತ್ತು ಕೊಂಡದರಿಂದ, ನನ್ನ ಸೊಸೆಯಾದ ಶಚಿಯನ್ನೂ ಮೊಮ್ಮಗನಾದ ಜಯಂತನನ್ನೂ ಕೈ ಹಿಡು ಕೊಂಡು, ಬಿಕಾರಿಯ ಹಾಗೆ ಸ್ವರ್ಗವನ್ನು ಬಿಟ್ಟು, ಎಲ್ಲಿಯೋ ಹೋದನು? ಮಹಾ ವಿಷ್ಣು ನೇಮಿಸಿದ ನಿನ್ನ ಮಗನ ಇಂದ್ರ ಪದವಿಯು ಅನ್ಯಾಕ್ರಾಂತವಾದ ಮೇಲೆ ಇನ್ನು ಜಗತ್ತಿನಲ್ಲಿ ಯಾವ ಮರ್ಯಾದೆ ತಾನೆ ನೆಲೆಯಾಗಿ ನಿಂತೀತು? ನೀನು ಸರ್ವಜ್ಞನು, ನೀನು ಅರಿಯದೆ ಇರುವದು ಯಾವದುಂಟು? ಎಂದು ಹೇಳಿ, ತಿರಿಗಿ ಗಂಡನ ಕಾಲಿನ ಮೇಲೆ ಬಿದ್ದು, ಹೊರಳುತ್ತಿರಲು; ಕಶ್ಯಪನು—ಎಲೈ, ಅದಿತಿಯೇ, ನೀನು ಹೆದರ ಬೇಡ. ನಿನ್ನ ಮಗನ ಇಂದ್ರ ಪದವಿಯು ಯಥಾ ಪ್ರಕಾರವಾಗುವ ಹಾಗೆ ಮಾಡುವೆನು ಎಂದು ಹೇಳಿ, ಆಕೆಗೆ ಅಭಯವನ್ನು ಕೊಟ್ಟು, ಅವಳನ್ನು ಕರೆದು ಕೊಂಡು, ಸಿದ್ಧಾಶ್ರಮವೆಂಬ ಒಂದು ಪುಣ್ಯಾಶ್ರಮಕ್ಕೆ ಬಂದು, ಅಲ್ಲಿ ಶುಚಿರ್ಭೂತನಾಗಿ, ಮಹಾ ವಿಷ್ಣುವನ್ನು ಕುರಿತು ಅನೇಕ ಸಹಸ್ರ ವರ್ಷ ತಪಸ್ಸನ್ನು ಮಾಡುತ್ತಾ ಇದ್ದನು. ಅದಿತಿ ದೇವಿಯು ಶುಚಿರ್ಭೂತಳಾಗಿ, ಸದಾ ಪತಿ ಶುಶ್ರೂಷೆಯನ್ನು ಮಾಡಿ ಕೊಂಡಿದ್ದಳು.

ಹೀಗಿರುವಲ್ಲಿ, ಕ್ಷೀರ ಸಮುದ್ರದಲ್ಲಿ ಶೇಷ ಶಾಯಿಯಾದ ಮಹಾ ವಿಷ್ಣುವು ತನ್ನ ಪ್ರಾಣ ಪ್ರಿಯಳಾದ ಲಕ್ಷ್ಮಿಯನ್ನು ಕುರಿತು—ಎಲೇ, ದೇವಿಯೇ, ನನ್ನ ಪರಮ ಭಕ್ತನಾದ ಬಲೀಂದ್ರನು ನನ್ನಿಂದ ನಿಯಮಿತನಾದ ಇಂದ್ರನ ಪದವಿಯನ್ನು ಕಿತ್ತು ಕೊಂಡು, ಆತನನ್ನು ಸ್ವರ್ಗದಿಂದ ಓಡಿಸಿದ್ದಾನೆ. ಈಗ ಆ ಇಂದ್ರನ ತಂದೆಯಾದ ಕಶ್ಯಪನು ತಿರಿಗಿ ಬಲಿಯಿಂದ ಇಂದ್ರನಿಗೆ ಇಂದ್ರ ಪದವಿಯನ್ನು ಕೊಡಿಸ ತಕ್ಕ ಬಗ್ಯೆ, ನನ್ನನ್ನು ಕುರಿತು ತಪಸ್ಸು ಮಾಡುತ್ತಲಿದ್ದಾನೆ. ಇಂಥ ಅನಿರ್ವಾಹವಾದ ಕೆಲಸವು ಒದಗಿ ಇದೆ. ಇದಕ್ಕೆ ಹ್ಯಾಗೆ ಮಾಡಲಿ? ಎಂದು ಕೇಳಲು; ಲಕ್ಷ್ಮಿಯು—ಎಲೈ, ಪ್ರಿಯನೇ, ನೀನು ಮಹಾ ಮಾಯಕಾರನು; ಏನೂ ಅರಿಯದವನ ಹಾಗೆ ನನ್ನನ್ನು ಕೇಳುತ್ತೀ. ನೀನು ಅರಿಯದೆ ಇರುವ ತಂತ್ರೋಪಾಯವು ಯಾವದುಂಟು? ನಂಟು ರತ್ನ ಎರಡೂ ಉಳಿಯುವ ಹಾಗೆ ಮಾಡಿ, ನಿನ್ನ ನೇಮಕಕ್ಕೆ ಭಂಗ ಬಾರದಂತೆ ನಡಿ, ಎಂದು ಹೇಳಿದಳು. ಆ ಮಾತನ್ನು ಕೇಳಿ, ಮಹಾ ವಿಷ್ಣುವು ನಸು ನಕ್ಕು, ಗರುಡಾರೂಢನಾಗಿ ಕಶ್ಯಪ ಮುನಿಯ ಬಳಿಗೆ ಬಂದು,—ಎನೈ, ಮುನಿಯೇ, ಯಾಕೆ ನನ್ನನ್ನು ಕುರಿತು ತಪಸ್ಸು ಮಾಡುತ್ತೀ? ನನ್ನಿಂದ ನಿನಗೆ ಆಗ ತಕ್ಕ ಕಾರ್ಯವೇನು? ಅದನ್ನು ಬೇಗ ಹೇಳು. ನಡಿಸಿ ಕೊಡುವೆನು, ಅಂದನು.

ಅದನ್ನು ಕೇಳಿ, ಕಶ್ಯಪ ಮುನಿಯು ವಿಷ್ಣುವಿಗೆ ವಂದಿಸಿ,—ನೀನು ಅದಿ

ತಿಯ ಹೊಟ್ಟೆಯಲ್ಲಿ ಹುಟ್ಟಿ, ಇಂದ್ರನಿಗೆ ತಮ್ಮನಾಗಿ, ಉಪೇಂದ್ರನೆನಿಸಿ ಕೊಂಡು, ಬಲಿ ಚಕ್ರವರ್ತಿ ಕಿತ್ತು ಕೊಂಡಿರುವ ಇಂದ್ರ ಪದವಿಯನ್ನು ತಿರಿಗಿ ಆತನಿಂದ ತೆಗೆದು, ಆ ಇಂದ್ರನಿಗೆ ಕೊಟ್ಟು, ನಿನ್ನ ನೇಮಕವು ನೆಲೆಯಾಗಿ ನಿಲ್ಲುವ ಹಾಗೆ ಮಾಡಿಕೋ, ಎಂದು ಬೇಡಿ ಕೊಂಡದರಿಂದ,—ಒಳ್ಳೇದು ಎಂದು ಆತನಿಗೆ ಅಭಯವನ್ನು ಕೊಟ್ಟು, ಅಂತರ್ಧಾನವಾಗಿ, ಅದಿತಿ ದೇವಿಯ ಗರ್ಭವನ್ನು ಹೊಕ್ಕು, ವಾಮನನಾಗಿ ಹುಟ್ಟಲು; ಕಶ್ಯಪನು ಬಹಳ ಸಂತೋಷದಿಂದ ಆತನಿಗೆ ಜಾತ ಕರ್ಮ ನಾಮ ಕರಣ ಉಪನಯನಗಳನ್ನು ಮಾಡಿ,—ಎಲೈ, ಮಗನೇ, ನೀನು ಅವತರಿಸಿದ ಕಾರ್ಯವನ್ನು ನೆರವೇರಿಸು ಎಂದು ಹೇಳಲು; ವಾಮನನು ಮೌಂಜೀ ಉಡಧಾರವನ್ನೂ ದಂಡು ಕೋಲು ಕೃಷ್ಣಾಜಿನಗಳನ್ನೂ ಧರಿಸಿ, ಬಿಳೀ ವಸ್ತ್ರ ದ್ವಯವನ್ನು ಉಟ್ಟು, ಹೊದ್ದು ಕೊಂಡು, ಚಿಕ್ಕ ಗಿಂಡಿಯನ್ನು ಕೈಯಲ್ಲಿ ಹಿಡಿದು ಕೊಂಡು, ಒಂದು ಗಜ ಪ್ರಮಾಣ ಉದ್ದವಾದ ದೇಹವುಳ್ಳವನಾಗಿ, ತಂದೆ ತಾಯಿಗಳಿಗೆ ನಮಸ್ಕರಿಸಿ, ಅಲ್ಲಿಂದ ಬಲೀಂದ್ರನ ಬಳಿಗೆ ಹೋಗುವದಕ್ಕೆ ಹೊರಟನು.

ಅಷ್ಟರಲ್ಲಿ ಬಲಿ ಚಕ್ರವರ್ತಿಯು ಶುಕ್ರಾಚಾರ್ಯರನ್ನು ವರಿಸಿ, ವೈಷ್ಣವ ಯಾಗವನ್ನು ಮಾಡುತ್ತ, ಹೋಮಾದಿ ನಿತ್ಯ ವಿಧಿಗಳನ್ನು ನೆರವೇರಿಸಿ, ಯಜ್ಞಾಶಾಲೆಯಲ್ಲಿ ವಿಷ್ಣುವಿನ ಕಥೆಗಳನ್ನು ಕೇಳುತ್ತ ಕುಳಿತಿದ್ದನು. ಅಲ್ಲಿಗೆ ಈ ವಾಮನನು ಹೋಗಲು; ಈತನ ಅಮಾನುಷ ತೇಜಸ್ಸನ್ನು ಬಲಿ ಚಕ್ರವರ್ತಿಯು ನೋಡಿ, ಜಗ್ಗನೆ ಎದ್ದು, ಬಂದು, ನಮಸ್ಕರಿಸಿ, ಮಣೆಯಲ್ಲಿ ಕುಳ್ಳಿರಿಸಿ, ಸತ್ಕರಿಸಿ,—ಎಲೈ, ಮಹಾತ್ಮನೇ, ನಿನ್ನ ಬರುವಿಕೆಯು ಬಹಳ ಅಪೂರ್ವವು. ನಿನ್ನ ದರುಶನದಿಂದ ನನ್ನ ಜನ್ಮವು ಸಾರ್ಥಕವಾಯಿತು; ನನ್ನ ಯಾಗವು ಸಂಪೂರ್ಣವಾಯಿತು, ಎಂದು ಸ್ತುತಿಸುತ್ತಿರುವಲ್ಲಿ, ಶುಕ್ರಾಚಾರ್ಯನು ಬಂದು, ಬಲೀಂದ್ರನ ಕಿವಿಯಲ್ಲಿ—ಇವನು ಮಾಯಾವಿಯಾದ ವಿಷ್ಣುವು. ಈ ವಾಮನ ರೂಪನ್ನು ಧರಿಸಿ, ನಿನ್ನಿಂದ ತ್ರಿಲೋಕಾಧಿಪತ್ಯವನ್ನು ಕಿತ್ತು ಕೊಂಡು, ತಿರಿಗಿ ಇಂದ್ರನಿಗೆ ಕೊಡ ಬೇಕೆಂದು ಬಂದಿದ್ದಾನೆ. ಇವನೇನಾದರೂ ಕೇಳಿದರೆ,—ಕೊಡುತ್ತೇನೆಂದು ಹೇಳ ಬೇಡ, ಎನಲು; ಬಲಿ ಚಕ್ರವರ್ತಿಯು—ನೀವು ನನ್ನ ಗುರುಗಳಾಗಿ, ಇಂಥಾ ಮಾತನ್ನು ನನಗೆ ಹೇಳ ಬಹುದೇ? ನನ್ನೊಡೆಯನಾದ ಮಹಾವಿಷ್ಣುವು ನನ್ನನ್ನು ಬಂದು ಕೇಳಿದರೆ, ಈ ತ್ರಿಲೋಕಾಧಿಪತ್ಯವು ಒಂದೇನು? ನನ್ನ ಪತ್ನಿ, ಪುತ್ರ, ಪ್ರಾಣಗಳು ಸಹಿತ ಆತನ ಪಾದಕ್ಕೆ ಒಪ್ಪಿಸುವೆನು, ಎಂದು ಹೇಳಿ, ತಿರಿಗಿ ವಾಮನನನ್ನು ಕುರಿತು—ಎಲೈ, ಮಹಾ ತೇಜಸ್ವಿಯಾದ ಬ್ರಾಹ್ಮಣ

ಬ್ರಹ್ಮಚಾರಿಯೇ, ಈಗ ನನ್ನ ಯಾಗ ಶಾಲೆಗೆ ಏನು ನಿಮಿತ್ಯ ಬಂದೆ? ನನ್ನ ಪ್ರಾಣ ಮೊದಲಾದ ಸಮಸ್ತ ವಸ್ತುವು ನಿನ್ನಾಧೀನವಾಗಿರುವದು. ನೀನು ಬೇಕಾದದ್ದನ್ನು ಕೇಳ ಬಹುದು, ಅಂದನು. ಆಗ ಆ ವಾಮನನು—ಎಲೈ, ದೈತ್ಯ ರಾಜನೇ, ನನಗೆ ನಿನ್ನ ವಸ್ತುಗಳಿಂದ ಏನೂ ಪ್ರಯೋಜನವಿಲ್ಲ. ನಾನು ಬ್ರಹ್ಮಚಾರಿಯು. ಸ್ವತಂತ್ರದಿಂದ ಇತರರ ಬಾಧೆ ಇಲ್ಲದಂತೆ ತಪಸ್ಸು ಮಾಡುವದಕ್ಕೆ ನನ್ನ ಈ ಪುಟ್ಟ ಹೆಜ್ಜೆಗಳಲ್ಲಿ ಮೂರು ಹೆಜ್ಜೆ ಭೂಮಿಯನ್ನು ಮಾತ್ರ ಧಾರೇ ಎರೆದು ಕೊಡು, ಎಂದು ಕೇಳಲು; ಬಲಿ ಚಕ್ರವರ್ತಿಯು ಬಹಳ ಸಂತೋಷದಿಂದ ತನ್ನ ಹೆಂಡತಿಯನ್ನು ಕರೆದು, ಗಿಂಡಿಯಲ್ಲಿ ನೀರು ತೆಗೆದು ಕೊಂಡು ಬಾ, ಎಂದು ಹೇಳಿ, ತನ್ನ ಕೈಯಲ್ಲಿ ಶ್ರೀ ತುಲಸೀ ದಳವನ್ನು ತೆಗೆದು ಕೊಂಡು, ವಾಮನನ ಕೈಯ ಮೇಲೆ ತನ್ನ ಕೈ ಇಟ್ಟು,—ಇಗೋ, ನಿನ್ನ ಅಡಿಯಲ್ಲಿ ಮೂರಡಿ ಭೂಮಿಯನ್ನು ತ್ರಿವಾಚಾ ಕೊಟ್ಟು ಇದ್ದೇನೆ, ಎಂದು ಹೇಳಿ,—ನೀರು ಬಿಡು ಎಂದು ಹೆಂಡತಿಗೆ ಹೇಳಲು; ಆ ಗಿಂಡಿಯ ದ್ವಾರದಲ್ಲಿ ಶುಕ್ರಾಚಾರ್ಯನು ಹೋಗಿ, ಕುಳಿತು ಕೊಂಡದರಿಂದ, ನೀರು ಬೀಳದೆ ಹೋಯಿತು. ಅದನ್ನು ಈ ವಾಮನನು ಕಂಡು—ಓಹೋ! ಈ ಗಿಂಡಿಯು ಕನ್ನದಲ್ಲಿ ಏನೋ ಕಸ ಶಿಕ್ಕಿ ಕೊಂಡಿರ ಬೇಕೆಂದು, ಒಂದು ದರ್ಭೆಯನ್ನು ತೆಗೆದು ಕೊಂಡು, ಅದರ ಕನ್ನದಲ್ಲಿ ಚುಚ್ಚಲು; ಆ ದರ್ಭಾಗ್ರವು ಶುಕ್ರಾಚಾರ್ಯನ ಒಂದು ಕಣ್ಣಿಗೆ ತಗಲಿ, ಕಣ್ಣು ಹೋದ್ದರಿಂದ, ಆತನು ಘಾಬರಿಯಾಗಿ, ಈಚೆಗೆ ಹೊರಟು ಬಂದನು. ಆ ಬಳಿಕ ನೀರು ಬಿತ್ತು.

ಅನಂತರದಲ್ಲಿ ವಾಮನನು ತನ್ನ ಗುಜ್ಜಾರೀ ರೂಪವನ್ನು ಬಿಟ್ಟು, ತ್ರಿವಿಕ್ರಮಾವತಾರವನ್ನು ಕೈ ಕೊಂಡು, ಆಕಾಶಕ್ಕೂ ಭೂಮಿಗೂ ಕೀಲು ಕೊಟ್ಟ ಹಾಗೆ ಬೆಳೆದು, ಒಂದು ಅಡಿಯಲ್ಲಿ ಭೂ ಲೋಕವನ್ನೆಲ್ಲಾ ಅಳೆದು, ಮತ್ತೊಂದು ಅಡಿಯಲ್ಲಿ ಮೇಲು ಲೋಕವೆಲ್ಲಾ ಅಳೆಯುವಾಗ ಬ್ರಹ್ಮಾಂಡ ಕಟಾಹಕ್ಕೆ ಈತನ ಕಾಲಿನ ಹೆಬ್ಬೆಟ್ಟಿನ ಉಗುರು ತಗಲಿ, ಅಲ್ಲಿಂದ ನಿರ್ಮಲವಾದ ಗಂಗೋದಕವು ಹೊರಟದ್ದರಿಂದ, ಚತುರ್ಮುಖ ಬ್ರಹ್ಮನು ಬೇಗ ಬಂದು, ಆ ಉದಕವನ್ನೆಲ್ಲಾ ತನ್ನ ಕಮಂಡಲದಲ್ಲಿ ತುಂಬಿ ಕೊಂಡು, ಸಮಸ್ತರಾದ ದೇವತೆಗಳಿಗೂ ಮುನಿಗಳಿಗೂ ಪ್ರೋಕ್ಷಿಸಿ ತಾನೂ ಪ್ರೋಕ್ಷಿಸಿ, ಕೊಂಡು, ಕಮಂಡಲದ ಉದಕವನ್ನು ತನ್ನ ಮನೆಯಲ್ಲಿ ಇಟ್ಟು ಕೊಂಡನು. ಆ ಬಳಿಕ ತ್ರಿವಿಕ್ರಮನು ಬಲೀಂದ್ರನನ್ನು ಕುರಿತು—ಎಲೈ, ದಾನ ಶೀಲನೇ ಎರಡು ಅಡಿಯ ಭೂಮಿ ಆಯಿತು. ಇನ್ನೊಂದು ಅಡಿಯ ಭೂಮಿ ಎಲ್ಲಿ? ತೋರಿಸು, ಎಂದು ಕೇಳಲು;

ಬಲಿ ಚಕ್ರವರ್ತಿಯು ಸಾಷ್ಟಾಂಗವಾಗಿ ನಮಸ್ಕರಿಸಿ,—ಎಲೈ, ಜಗನ್ನಾಥನೇ, ನಿನ್ನ ಇನ್ನೊಂದಡಿಗೆ ಭೂಮಿಯನ್ನು ನಾನು ಎಲ್ಲಿಂದ ತರಲಿ? ಇಗೋ, ನನ್ನ ಬೆನ್ನಿನ ಮೇಲೆ ಇಟ್ಟು, ಇನ್ನೊಂದಡಿಗೆ ಅಳೆದುಕೋ, ಎಂದು ಹೇಳಲು; ವಾಮನನು ತನ್ನ ಪಾದವನ್ನು ಆತನ ಬೆನ್ನಿನ ಮೇಲೆ ಇಟ್ಟು, ರಸಾತಲಕ್ಕೆ ಮೆಟ್ಟಿದನು. ಅಲ್ಲಿ ಅಷ್ಟೊತ್ತಿಗೆ ದಿವ್ಯವಾದ ಮನೆಯನ್ನು ವಿಶ್ವಕರ್ಮನು ಮಾಡಿದ್ದನು. ಆಗ ತ್ರಿವಿಕ್ರಮನು ಆ ರೂಪವನ್ನು ಬಿಟ್ಟು, ದಿವ್ಯ ಮಂಗಳ ವಿಗ್ರಹವನ್ನು ಧರಿಸಿ, ಶಂಖ, ಚಕ್ರ, ಗದಾ ಧರನಾಗಿ, ಬಲಿ ಚಕ್ರವರ್ತಿಗೆ ಪ್ರಸನ್ನನಾಗಿ, ಆತನನ್ನು ಆಲಿಂಗಿಸಿ ಕೊಂಡು, ಕೈ ಹಿಡಿದು ಕೊಂಡು, ಆ ಮನೆಯ ಒಳಗೆ ಕರೆದು ಕೊಂಡು ಹೋಗಿ, ದಿವ್ಯ ಸಿಂಹಾಸನದ ಮೇಲೆ ಕುಳ್ಳಿರಿಸಿ, ಮುನಿ ಜನಗಳು ಸಮೇತನಾಗಿ ಆತನನ್ನು ಮುಂದಣ ಇಂದ್ರ ಪದವಿಗೆ ಪಟ್ಟಾಭಿಷೇಕವನ್ನು ಮಾಡಿ,—ಎಲೈ ಪರಮ ಭಾಗವತನೇ, ನಿನ್ನ ಭಕ್ತಿಗೆ ನಾನು ಬಹಳವಾಗಿ ಮೆಚ್ಚಿದೆನು. ಈ ದಿವಸ ಕಾರ್ತೀಕ ಶುದ್ಧ ಪಾಡ್ಯವಾದ್ದರಿಂದ, ಸಮಸ್ತ ಜನರು ವರ್ಷೇ ವರ್ಷೇ ಈ ದಿನದಲ್ಲಿ ನಿನ್ನನ್ನು ಪೂಜಿಸಲಿ; ನೀನು ಮನಸ್ಸಿನಲ್ಲಿ ನೆನಸಿದ ಅಭೀಷ್ಟಗಳೆಲ್ಲಾ ನಿನಗೆ ಸಿದ್ಧಿಸಲಿ ಎಂದು, ವರವನ್ನು ಕೊಟ್ಟನು. ಆಗ ಬಲಿ ಚಕ್ರವರ್ತಿಯು—ಮಹಾ ವಿಷ್ಣುವೇ, ನಿನ್ನ ಭಕ್ತನಾದ ನನಗೆ ಒಂದು ಎಡರೂ ತಟ್ಟದಂತೆ ನನ್ನ ಬಾಗಲಲ್ಲಿ ನೀನು ಕಾದು ಕೊಂಡಿರ ಬೇಕೆಂದು, ಬೇಡಿ ಕೊಂಡದರಿಂದ,—ಹಾಗೆ ಆಗಲಿ ಎಂದು, ಆತನ ಬಾಗಿಲಿನಲ್ಲಿ ಗದಾ ದಂಡವನ್ನು ಧರಿಸಿ, ಆತನಿಂದ ಪೂಜೆಯನ್ನು ತೆಗೆದು ಕೊಳ್ಳುತ್ತಾ ಇದ್ದನು.

ತರುವಾಯ ವಿಷ್ಣುವು ಯಥಾ ಪ್ರಕಾರ ವಾಮನನಾಗಿ ತಂದೆ ತಾಯಿಗಳ ಬಳಿಗೆ ಬಂದು, ನಮಸ್ಕಾರ ಮಾಡಿ, ಇಂದ್ರನನ್ನು ಕರೆಸಿ, ಸ್ವರ್ಗ ಲೋಕಕ್ಕೆ ಕರೆದು ಕೊಂಡು ಹೋಗಿ, ತ್ರಿಲೋಕಾಧಿಪತ್ಯದಲ್ಲಿ ಇಟ್ಟು, ವೈಕುಂಠ ಲೋಕಕ್ಕೆ ಹೋದನು.

### 80. The Sixth or Parashu Rama Incarnation.

### ೮೦. ಪರಶು ರಾಮಾವತಾರದ ಕಥೆ.

ಶ್ರೀ ಮಹಾ ವಿಷ್ಣುವು ಶಂಖ ಚಕ್ರ ಗದಾ ಧರನಾಗಿ, ಕ್ಷೀರ ಸಮುದ್ರದಲ್ಲಿ ಶೇಷ ಶಾಯಿಯಾಗಿ, ಯೋಗ ನಿದ್ರೆಯನ್ನು ಮಾಡುತ್ತಿದ್ದನು. ಹೀಗಿರುವಲ್ಲಿ, ಒಂದು ದಿವಸ ಆ ಮಹಾ ವಿಷ್ಣುವಿನ ಆಯುಧವಾದ ಸುದರ್ಶನವೆಂದು ಹೆಸರುಳ್ಳ ಚಕ್ರವು ತನ್ನ ಮನಸ್ಸಿನಲ್ಲಿ—ಈ ಹರಿಯು ಮಧು ಕೈಟಭಾದಿ ದೈತ್ಯರನ್ನು ನನ್ನ ಸಹಾಯದಿಂದ ಜೈಸಿ, ದೈತ್ಯಾಂತಕನೆಂದು ಸರ್ವ ಲೋಕಗಳಿಂದ ಕೊಂಡಾ

ಡಿಸಿ ಕೊಂಡಿದ್ದಾನೆ. ನನ್ನ ಸಹಾಯವಿಲ್ಲದಿದ್ದರೆ, ದೈತ್ಯರನ್ನು ಹ್ಯಾಗೆ ಜೈಸು
ವನು? ಎಂದು, ಅಹಂಕಾರದಿಂದ ಒಂದು ದಿವಸ ಯೋಚಿಸಿತು. ಸರ್ವಾಂತ
ರ್ಯಾಮಿಯಾದ ವಿಷ್ಣುವಿಗೆ ಅದು ತಿಳಿದು,—ಈ ಚಕ್ರದ ಗರ್ವವನ್ನು ಪರಿಹರಿಸ
ಬೇಕು. ಲೋಕದಲ್ಲಿ ಪ್ರಭುತ್ವ ಮಾಡುವವರ ಮುದ್ರಾ ಶಕ್ತಿಯಿಂದ ಆ ಪ್ರಭು
ವಿನ ಕೈ ಕೆಳಗಿರುವ ಚಿಕ್ಕ ಉದ್ಯೋಗಸ್ಥರು ತಮ್ಮ ತಮ್ಮ ಅಧಿಕಾರದಲ್ಲಿ
ಜಾಗ್ರತೆಯಾಗಿ ಇದ್ದು ಕೊಂಡು, ಎಲ್ಲಾ ಕೆಲಸಗಳಲ್ಲಿಯೂ ಘಟ್ಟಿಗರಾಗಿ
ದ್ದಾಗ್ಯೂ, ಅವರನ್ನು ಅನ್ಯರು—ನೀವು ಅಂಥಾವರು, ಇಂಥಾವರು ಎಂದು ಹೊಗ
ಳಿದರೆ—ನಾನು ಎಷ್ಟು ಮಾತ್ರದವನು? ಎಲ್ಲಾ ನಮ್ಮ ಪ್ರಭುಗಳ ಶಕ್ತಿಯಿಂದ
ನಡೆಯುತ್ತದೇ ಹೊರ್ತು, ನಮ್ಮಿಂದ ಎಷ್ಟು ಮಾತ್ರವು ನಡೆಯುವದಿಲ್ಲ. ಪ್ರಭು
ವಿನ ಕಟಾಕ್ಷವು ಬುದ್ಧಿ ಪರಾಕ್ರಮಗಳಿಲ್ಲದೆ ಮೂಢನಾಗಿರುವ ಒಬ್ಬ ಅಲ್ಪ
ಮನುಷ್ಯನ ಮೇಲೆ ಬಿದ್ದರೆ, ಅವನು ಬುದ್ಧಿವಂತನಾಗಿಯೂ, ಸಮರ್ಥನಾಗಿಯೂ
ಕಾರ್ಯ ದಕ್ಷನಾಗಿಯೂ, ಸಕಲ ಕಾರ್ಯಗಳನ್ನು ನಿರ್ವಹಿಸಿ, ಪ್ರಭುವಿನ ರಾಜ್ಯ
ಕೋಶಗಳನ್ನು ಅಭಿವೃದ್ಧೀ ಮಾಡಿ, ಪ್ರಭುವಿನಿಂದಲೇ ಹೊಗಳಿಸಿ ಕೊಳ್ಳುತ್ತಾ
ನೆ. ಪ್ರಭುವಿನ ಕಟಾಕ್ಷ ತಪ್ಪಿದವನು ಎಷ್ಟು ಸಮರ್ಥನಾದಾಗ್ಯೂ, ಎಷ್ಟು ಜಾಣ
ನಾದಾಗ್ಯೂ,—ಹೇಡಿಯು, ಹೆಡ್ಡನು, ಸೋಮಾರಿಯು, ಎಂದು ಎಲ್ಲರಿಂದ ಹೀಯಾ
ಳಿಸಿ ಕೊಳ್ಳುವನೆಂದು ಹೇಳಿ ಕೊಳ್ಳುತ್ತ, ತನ್ನ ಮನಸ್ಸಿನಲ್ಲಿಯೂ ಹಾಗೇ ತಿಳು
ಕೊಳುತ್ತ, ತಾಗಿ ಬಾಗಿ ನಡೆದರೆ, ಅವನು ಮತ್ತು ಘಟ್ಟಿಗನು ಎನ್ನಿಸಿ ಕೊಳ್ಳುವ
ಹಾಗೆ, ಪ್ರಭುವು ಅವನಲ್ಲಿ ದಯ ಮಾಡಿ ನಡಿಸ ಬೇಕು. ಹಾಗೆ ನಡೆಯದೆ, ಕೊಬ್ಬಿ,
ಅಹಂಬ್ರಹ್ಮತ್ವದಿಂದ ತನ್ನಿಂದಲೇ ತನ್ನ ಪ್ರಭುವಿಗೆ ಪ್ರಭುತ್ವ ಉಂಟಾಯಿತೆಂದು
ಎಣಿಸುವ ಸೇವಕನಿಗೆ ಆ ಕೊಬ್ಬು ತಗ್ಗುವಂತೆ ಸ್ವಲ್ಪ ಶಿಕ್ಷೇ ಮಾಡಿ, ವಿಧೇಯ
ನಾಗಿ ಮಾಡಿ ಕೊಂಡು, ತಿರಿಗಿ ತನ್ನಲ್ಲಿ ಶೇರಿಸಿ ಕೊಂಡರೆ, ಪ್ರಭುತ್ವವು ಚನ್ನಾ
ಗಿ ನಡೆಯುವದು. ಹಾಗೆ ಮಾಡದೆ, ಉದಾಸೀನದಿಂದ ಇದ್ದರೆ, ಆತನ ಪ್ರಭುತ್ವ
ವೇ ಕ್ಷೀಣವಾಗಿ ಹೋಗುವದೆಂದು, ತನ್ನ ಮನಸ್ಸಿನಲ್ಲಿ ಆಲೋಚಿಸಿ, ನಿಶ್ಚೈಸಿ,
ಆ ಸುದರ್ಶನವನ್ನು ಕರಿತು—ಎಲೈ, ಚಕ್ರ ರಾಜನೇ,—ನಾನು ಸಮಸ್ತ ದೈತ್ಯ
ರನ್ನು ಸಂಹರಿಸುವಂಥಾದ್ದು ನಿನ್ನ ಶಕ್ತಿಯಿಂದಲೋ? ಇಲ್ಲವೆ ನನ್ನ ಶಕ್ತಿಯಿಂ
ದಲೋ? ಎಂದು, ನನ್ನ ಮನಸ್ಸಿನಲ್ಲಿ ಒಂದು ಸಂಶಯವು ಹುಟ್ಟಿ ಇದೆ. ಅದನ್ನು
ಪರಿಕ್ಷೆ ಮಾಡಿ, ನೋಡ ಬೇಕು. ಆದ್ದರಿಂದ ಸೀನು ನಿನ್ನ ಸಾವಿರ ಅರಗಳನ್ನು
ಸಾವಿರ ತೋಳುಗಳಾಗಿ ಮಾಡಿ ಕೊಂಡು, ಹೇಹಯ ದೇಶದ ಅರಸಾದ ಕೃತ
ವೀರ್ಯನ ರಾಣಿಯು ಗರ್ಭದಲ್ಲಿ ಹುಟ್ಟಿ, ಮಹಾ ಪರಾಕ್ರಮ ಶಾಲಿಯಾಗಿ, ಚಕ್ರ

ವರ್ತಿ ಅನ್ನಿಸಿ ಕೊಂಡು, ಮಹೋನ್ನತನಾಗಿ, ಕ್ಷತ್ರಿಯ ಸಾರ್ವಭೌಮನಾಗಿ ರು. ನಾನು ಎರಡು ತೋಳುಗಳಿಂದ ಒಬ್ಬ ಬ್ರಾಹ್ಮಣ ಮುನಿಯ ಮಗನಾಗಿ ಹುಟ್ಟಿ, ನಿನ್ನೊಡನೆ ಏನೋ ಒಂದು ಸ್ವಲ್ಪ ಸೇವಾ ಮಾಡಿ ಕೊಂಡು, ಜಗಳಕ್ಕೆ ಬರುವೆನು. ಆಗ ನಮ್ಮಿಬ್ಬರಲ್ಲಿ ಜಯ ಶೀಲನಾದವನು ಯಾರೋ, ಆತನೇ ಶಕ್ತನೆಂದು ತಿಳಿಯ ಬಂದು, ನನ್ನ ಮನಸ್ಸಿನ ಸಂಶಯವು ಪರಿಹಾರವಾಗುತ್ತದೆ, ಎಂದು ಹೇಳಿದನು.

ಅದನ್ನು ಕೇಳಿ, ಚಕ್ರ ರಾಜನು ಹೆಮ್ಮೆಯಿಂದ—ಹಾಗೆ ಆಗಲಿ ಎಂದು ಹೇಳಿ, ವೈಕುಂಠದಿಂದ ಹೊರಟು, ಮಾಹಿಷ್ಮತೀ ನಗರದ ಅರಸಾದ ಕೃತವೀರ್ಯ ನಿಗೆ ಸಾವಿರ ತೋಳುಗಳುಳ್ಳ ಮಗನಾಗಿ ಹುಟ್ಟಿ, ಕಾರ್ತವೀರ್ಯಾರ್ಜುನನೆಂಬ ಹೆಸರಿನಿಂದ ಪ್ರಸಿದ್ಧನಾಗಿ, ಪ್ರಾಯದವನಾಗಿ, ತಂದೆಯ ಅಪ್ಪಣೆಯನ್ನು ತೆಗೆದು ಕೊಂಡು, ಸಕಲ ದಿಗ್ದೇಶಗಳನ್ನೂ ಇಂದ್ರಾದಿ ದಿಕ್ಪಾಲಕರನ್ನೂ ಜೈಸಿ, ಕಪ್ಪ ಗಳನ್ನು ತೆಗೆದು ಕೊಂಡು, ತನ್ನ ಪಟ್ಟಣಕ್ಕೆ ಬಂದು, ತಂದೆಗೆ ನಮಸ್ಕರಿಸಲು; ತಂದೆಯು ಶೂರನಾದ ಮಗನಿಗೆ ಹೇಹಯ ರಾಜ್ಯಾಭಿಷೇಕವನ್ನು ಮಾಡಿ, ತನ್ನ ಹೆಂಡತಿಯೊಡನೆ ತಪಸ್ಸಿಗೆ ಹೋದನು. ತರುವಾಯ ಕಾರ್ತವೀರ್ಯಾ ರ್ಜುನನು—ಕೃತ ಯುಗಕ್ಕೆ ಚಕ್ರವರ್ತಿ ಅನ್ನಿಸಿ ಕೊಂಡು ಜಗದೇಕ ವೀರ ನಾದ ರಾವಣಾಸುರನನ್ನು ಜೈಸಿ, ಲೋಕೈಕ ವಿಖ್ಯಾತನಾಗಿದ್ದನು.

ಹೀಗೆ ಕೆಲವು ಕಾಲ ನಡೆಯುತ್ತಿರುವಲ್ಲಿ, ಭೂಮಿ ದೇವಿಯು ದುಷ್ಟ ಕ್ಷತ್ರಿ ಯರ ಭಾರವನ್ನು ಸಹಿಸಲಾರದೆ, ಮಹಾ ವಿಷ್ಣುವಿನ ಬಳಿಗೆ ಹೋಗಿ, ಅಡ್ಡ ಬಿ ದ್ದು,—ಎಲೈ, ಸ್ವಾಮಿಯೇ, ದುರ್ಜನರಾದ ಅರಸುಗಳು ಬಹಳವಾಗಿ ಹೆಚ್ಚಿರು ವದರಿಂದ, ಅವರ ಭಾರವನ್ನು ನಾನು ಹೊರಲಾರೆನು. ಅವರನ್ನೆಲ್ಲಾ ಸಂಹರಿಸಿ, ನನ್ನ ಹೊರೆಯನ್ನು ಇಳಿಸಿ, ಕಾಪಾಡ ಬೇಕೆಂದು ಬೇಡಿ ಕೊಳ್ಳಲು; ವಿಷ್ಣು ವು—ಒಳ್ಳೇದು, ಹಾಗೆ ಮಾಡುವೆನೆಂದು ಭೂಮಿಗೆ ಅಭಯವನ್ನು ಕೊಟ್ಟು, ಕ ಳುಹಿಸಿದನು. ಅಷ್ಟರಲ್ಲಿ ಭೂಲೋಕದಲ್ಲಿ ಭೃಗು ಮುನಿಯ ವಂಶದಲ್ಲಿ ಹುಟ್ಟಿ ದ ಜಮದಗ್ನಿ ಎಂಬ ಮಹಾ ಋಷಿಯು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳ ನ್ನು ಕುಶಿಕ ಕುಲದಲ್ಲಿ ಹುಟ್ಟಿದ ಗಾಧಿ ರಾಯನೆಂಬ ಅರಸಿಗೆ ಮದುವೆಯನ್ನು ಮಾಡಿ ಕೊಟ್ಟನು. ಆ ಮಗಳು ಕೆಲವು ದಿವಸ ತನ್ನ ಗಂಡನ ಮನೆಯೊಳಗಿ ದ್ದು, ತಂದೆ ತಾಯಿಗಳನ್ನು ನೋಡುವ ಉದ್ದಿಶ್ಯ ತೌರು ಮನೆಗೆ ಬಂದಿದ್ದಳು. ಆ ವೇಳೆಯಲ್ಲಿ ಜಮದಗ್ನಿಯ ಹೆಂಡತಿಯು ಗಂಡನ ಬಳಿಗೆ ಹೋಗಿ,—ನನಗೂ, ನನ್ನ ಮಗಳಾದ ಗಾಧಿ ರಾಯನ ಹೆಂಡತಿಗೂ ಗಂಡು ಮಕ್ಕಳಾಗುವಂತೆ ತಾವು

ಅನುಗ್ರಹ ಮಾಡ ಬೇಕೆಂದು, ವಿನಯದಿಂದ ಬೇಡಿ ಕೊಂಡಳು. ಜಮದಗ್ನಿಯು—ಒಳ್ಳೇದು ಎಂದು ಹೇಳಿ, ಎರಡು ಬಟ್ಟಲಲ್ಲಿ ನೀರು ತರಿಸಿ, ಅದನ್ನು ಅಭಿಮಂತ್ರಿಸಿ, ಹೆಂಡತಿಯ ಕೈಯಲ್ಲಿ ಕೊಟ್ಟು,—ಈ ಬಟ್ಟಲಿನ ನೀರನ್ನು ನಿನ್ನ ಮಗಳಿಗೆ ಕೊಡು. ಈ ಕಿಣ್ಣದ ಉದಕವನ್ನು ನೀನು ಕುಡಿ. ಇಬ್ಬರಿಗೂ ಈ ಮಂತ್ರೋದಕದಿಂದ ಮಹಾ ತೇಜಸ್ವಿಗಳಾದ ಗಂಡು ಮಕ್ಕಳು ಹುಟ್ಟುವರೆಂದು ಹೇಳಿ ಕೊಟ್ಟು, ಕಳುಹಿಸಿದನು. ಅವಳು ಆ ಎರಡು ಬಟ್ಟಲಿನ ಉದಕವನ್ನು ತೆಗೆದು ಕೊಂಡು, ಮಗಳ ಬಳಿಗೆ ಬಂದು—ಇಗೊಳ್ಳೇ, ಅಮ್ಮಾ! ನಿಮ್ಮ ತಂದೆಯು ಈ ಎರಡು ಕಿಣ್ಣಗಳಲ್ಲಿರುವ ನೀರನ್ನು ಅಭಿಮಂತ್ರಿಸಿ, ಈ ಕಿಣ್ಣದ ನೀರನ್ನು ನಾನು ಕುಡಿಯುವಂತೆಯೂ, ಈ ಬಟ್ಟಲಿನ ನೀರನ್ನು ನೀನು ಕುಡಿಯುವಂತೆಯೂ, ಕೊಟ್ಟಿದ್ದಾನೆ. ತೆಗೆದುಕೋ, ಎಂದು ಕೊಟ್ಟಳು. ಆ ಮಗಳು ತನ್ನ ತಂದೆಯು ಹೆಂಡತಿಗೆ ಏನೋ ವಿಶೇಷವಾಗಿ ಅಭಿಮಂತ್ರಿಸಿ, ಕೊಟ್ಟಿರಬಹುದು, ಎಂದು ಮನಸ್ಸಿನಲ್ಲಿ ಎಣಿಸಿ, ತಾಯಿಯನ್ನು ಕುರಿತು—ಅಮ್ಮಾ, ನಮ್ಮ ತಂದೆಯು ನಿನಗೆ ಅಭಿಮಂತ್ರಿಸಿ ಕೊಟ್ಟಿರುವ ಬಟ್ಟಲಿನ ನೀರನ್ನು ನನಗೆ ಕೊಡು. ನನಗೆ ಕೊಟ್ಟಿರುವ ಬಟ್ಟಲಿನ ಜಲವನ್ನು ನೀನು ತೆಕ್ಕೋ, ಅನ್ನಲು; ತಾಯಿಯು ಮಗಳ ಮೇಲಿನ ವ್ಯಾಮೋಹದಿಂದ ಹಾಗೆ ಕೊಟ್ಟಳು. ಆ ಬಳಿಕ ಇಬ್ಬರು ಮಂತ್ರೋದಕ ಮಹಿಮೆಯಿಂದ ಇಬ್ಬರೂ ಗಂಡು ಮಕ್ಕಳನ್ನು ಹೆತ್ತರು. ಜಮದಗ್ನಿಯು ಹನ್ನೆರಡನೇ ದಿವಸದಲ್ಲಿ ತನ್ನ ಮೊಮ್ಮಗನಾದ ಕ್ಷತ್ರಿಯೋತ್ತಮನಾದ ಗಾಧಿ ರಾಯನ ಮಗನಿಗೆ ವಿಶ್ವಾಮಿತ್ರನೆಂದೂ, ತನ್ನ ಹೆಂಡತಿಯ ಹೊಟ್ಟೆಯಲ್ಲಿ ಭೂ ಭಾರ ನಿವಾರಣಾರ್ಥವಾಗಿ ವಿಷ್ಣುವಿನ ಅಂಶದಿಂದ ಹುಟ್ಟಿದ ಮಗನಿಗೆ ರಾಮನೆಂದೂ, ನಾಮಕರಣವನ್ನು ಮಾಡಿದನು.

ಗಾಧಿ ರಾಯನು ಈ ಸುದ್ದಿಯನ್ನು ಕೇಳಿ, ಸಂತೋಷ ಪಟ್ಟು, ಮಾವನ ಬಳಿಗೆ ಬಂದು, ಅತ್ತೆ ಮಾವಂದಿರಿಗೆ ನಮಸ್ಕರಿಸಿ, ತನ್ನ ಹೆಂಡತಿ ಮಕ್ಕಳನ್ನು ಪಟ್ಟಣಕ್ಕೆ ಕರೆದು ಕೊಂಡು ಹೋಗಿ, ಪ್ರಬುದ್ಧನಾದ ಮಗನಿಗೆ ಪಟ್ಟವನ್ನು ಕಟ್ಟಿ, ತಪಸ್ಸಿಗೆ ಹೋದನು. ಆ ಮೇಲೆ ವಿಶ್ವಾಮಿತ್ರನು ಅನೇಕ ಸಹಸ್ರ ವರ್ಷ ರಾಜ್ಯ ಭಾರವನ್ನು ಮಾಡಿ, ಮಂತ್ರೋದಕದ ಮಹಿಮೆಯಿಂದ—ಬ್ರಾಹ್ಮಣನಾಗ ಬೇಕೆಂದು ಬುದ್ಧಿ ಹುಟ್ಟಿ, ತನ್ನ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿ, ಅನೇಕ ವರ್ಷ ಮಾಡಿದ ತಪಸ್ಸಿನಿಂದ ಬ್ರಹ್ಮ ದೇವನನ್ನು ಮೆಚ್ಚಿಸಿ, ಬ್ರಹ್ಮ ಋಷಿತ್ವವನ್ನು ಪಡೆದು, ಜಗದ್ವಿಖ್ಯಾತನಾದನು.

ಇತ್ತಲಾ ಜಮದಗ್ನಿಯು ಮಗನಾದ ರಾಮನು ಬ್ರಹ್ಮ ಕ್ಷೇತ್ರದಲ್ಲಿ ಹುಟ್ಟಿದ

ವನಾದಾಗ್ಯೂ, ಕ್ಷತ್ರಿಯ ಮಂತ್ರೋದಕದ ಮಹಿಮೆಯಿಂದ—ಜಗದೇಕ ವೀರನೆನ್ನಿಸಿ ಕೊಳ್ಳ ಬೇಕೆಂದು ಬುದ್ಧಿ ಹುಟ್ಟಿ, ಕೈಲಾಸ ಪರ್ವತಕ್ಕೆ ಹೋಗಿ ಘೋರವಾದ ತಪಸ್ಸನ್ನು ಮಾಡಿ, ಪರಮೇಶ್ವರನನ್ನು ಮೆಚ್ಚಿಸಿ, ಆತನಲ್ಲಿ ಸಕಲ ಧನುರ್ವೇದಗಳನ್ನು ಕಲಿತು, ಎಲ್ಲಾ ಮಂತ್ರಾಸ್ತ್ರಗಳ ಪ್ರಯೋಗೋಪಸಂಹಾರಗಳನ್ನು ಉಪದೇಶಿಸಿ ಕೊಂಡು, ಆತನ ಸೇವೆಯನ್ನು ಮಾಡುತ್ತ, ಕೆಲವು ದಿವಸವಿರುವಲ್ಲಿ, ಪರಮೇಶ್ವರನು ಶಿಷ್ಯನಾದ ರಾಮನ ಗುಣಕ್ಕೆ ಬಹಳ ಸಂತೋಷ ಪಟ್ಟು,—ಇವನ ಸಾಮರ್ಥ್ಯವನ್ನು ಪರೀಕ್ಷಿಸಿ, ನೋಡ ಬೇಕೆಂದು ಎಣಿಸಿ, ಒಂದು ದಿವಸ ಮಹಾ ಶೂರನಾದ ತನ್ನ ಮಗ ಷಣ್ಮುಖನನ್ನೂ ಶಿಷ್ಯನಾದ ರಾಮನನ್ನೂ ಕರೆದು,—ನೀವಿಬ್ಬರೂ ಯುದ್ಧವನ್ನು ಮಾಡಿ, ನಿಮ್ಮಿಬ್ಬರ ಶಕ್ತಿಯ ಹೆಚ್ಚು ಕುಂದನ್ನು ನನಗೂ ಪಾರ್ವತಿಗೂ ತೋರಿಸ ಬೇಕೆಂದು ಹೇಳಲು; ಅವರಿಬ್ಬರು ಸೋಲು ಗೆಲುವು ಇಲ್ಲದೆ ಏಳು ದಿವಸದ ವರಿಗೂ ಜಗಳವಾಡಿ, ಕಡೆಗೆ ಷಣ್ಮುಖನು ರಾಮನ ಜೃಂಭಣಾಸ್ತ್ರ ಪ್ರಯೋಗದಿಂದ ಸ್ತಂಭೀ ಭೂತನಾದದ್ದನ್ನು ನೋಡಿ, ಪಾರ್ವತೀ ಪರಮೇಶ್ವರರು ರಾಮನನ್ನು ತಬ್ಬಿ ಕೊಂಡು, ಮುದ್ದಾಡಿ, ಅಮೋಘವಾದ ಒಂದು ಕೊಡಲಿಯನ್ನು ಕೊಟ್ಟು,—ಈ ಆಯುಧವನ್ನು ಸದಾ ನೀನು ಧರಿಸಿ ಕೊಂಡು, ಪರಶು ರಾಮನೆಂದು ಲೋಕದಲ್ಲಿ ಹೆಸರನ್ನು ಹೊಂದಿ, ಜಗದ್ವಿಖ್ಯಾತನಾಗು. ನಿನ್ನ ತಾಯಿ ತಂದೆಗಳ ಬಳಿಗೆ ಹೋಗಿ, ಅವರ ಶುಶ್ರೂಷೆಯನ್ನು ಮಾಡಿ ಕೊಂಡಿರು ಎಂದು ಹೇಳಿ, ಹರಸಿ, ಕಳುಹಿಸಿದನು. ತರುವಾಯ ಪರಶು ರಾಮನು ಪಾರ್ವತೀ ಪರಮೇಶ್ವರರಿಗೆ ವಂದಿಸಿ, ತಾಯಿ ತಂದೆಗಳ ಬಳಿಗೆ ಬಂದು, ನಮಸ್ಕಾರವನ್ನು ಮಾಡಿ, ತನ್ನಲ್ಲಿ ಪಾರ್ವತೀ ಪರಮೇಶ್ವರರು ಅನುಗ್ರಹ ಮಾಡಿದ್ದನ್ನೂ ತಾನು ಷಣ್ಮುಖನನ್ನು ಜೈಸಿದ್ದನ್ನೂ ತಿಳಿಸಿ, ಮಾತಾ ಪಿತೃಗಳ ಶುಶ್ರೂಷೆಯನ್ನು ಮಾಡಿ ಕೊಂಡಿದ್ದನು.

ಹೀಗಿರುವಲ್ಲಿ, ತಂದೆಯ ಯಜ್ಞಾಹುತಿಗೆ ದರ್ಭೆ ಸಮಿತ್ತುಗಳನ್ನು ತರುವದಕ್ಕೆ ಕೊಡಲಿಯನ್ನು ಧರಿಸಿ, ರಾಮನು ಅರಣ್ಯಕ್ಕೆ ಹೋದ ಸಮಯದಲ್ಲಿ ಕಾರ್ತವೀರ್ಯಾರ್ಜುನನು ದಿಗ್ವಿಜಯಾರ್ಥವಾಗಿ ಚತುರಂಗ ಬಲ ಸಮೇತನಾಗಿ ಹೋಗಿದ್ದವನು ತಿರಿಗಿ ತನ್ನ ಮಾಹಿಷ್ಮತೀ ಪಟ್ಟಣಕ್ಕೆ ಬರುವಾಗ, ಮಧ್ಯೆ ಮಾರ್ಗದಲ್ಲಿ ಜಮದಗ್ನಿ ಋಷಿಯ ಆಶ್ರಮವನ್ನು ಕಂಡು, ಒಳಗೆ ಹೋಗಿ, ಋಷಿಯನ್ನು ಕಂಡು, ಪಾದಾಭಿವಂದನೆಯನ್ನು ಮಾಡಿದನು. ಜಮದಗ್ನಿ ಋಷಿಯು ಚಕ್ರವರ್ತಿಯಾದ ಕಾರ್ತವೀರ್ಯಾರ್ಜುನನಿಗೆ ಅರ್ಘ್ಯಪಾದ್ಯಾಸನಾದಿ ಅತಿಥಿ ಪೂಜೆಯನ್ನು ಮಾಡಿ, ಸವಿ ನುಡಿಗಳಿಂದ ಕುಶಲ ಪ್ರಶ್ನೆಯನ್ನು ಕೇಳಿ,—ಈ ದಿವ

ಇಲ್ಲಿ ಇದ್ದು, ಸೇನೆ ಸಹಿತ ನಿನಗೆ ನಾನು ಮಾಡುವ ಅತಿಥಿ ಸತ್ಕಾರವನ್ನು ಕೈ ಕೊಂಡು, ತೆರಳ ಬೇಕೆಂದು, ಬಹು ತರವಾಗಿ ಪ್ರಾರ್ಥಿಸಲು; ಕಾರ್ತಿವೀರ್ಯಾರ್ಜುನನು—ಹಾಗೆಯೇ ಆಗಲಿ ಎಂದು ಹೇಳಿ, ಆ ಮುನಿಯ ಪರ್ಣ ಶಾಲೆಗೆ ಸ್ವಲ್ಪ ದೂರದಲ್ಲಿ ಗುಡಾರಗಳನ್ನು ಹೊಡಿಸಿ, ತನ್ನ ಚತುರಂಗ ಬಲವನ್ನು ಬಿಡಿಸಿ ಕೊಂಡು, ನಿಂತನು. ಆಗ ಜಮದಗ್ನಿ ಋಷಿಯು ತನ್ನ ಹೋಮ ಧೇನುವಾದ ಕಾಮಧೇನುವನ್ನು ಕರೆದು—ಎಲೈ, ಸುರಭಿಯೇ, ಚಕ್ರವರ್ತಿಯಾದ ಕಾರ್ತಿವೀರ್ಯಾರ್ಜುನನನ್ನು ಚತುರಂಗ ಬಲ ಸಮೇತನಾಗಿ—ಸತ್ಕಾರವನ್ನು ಮಾಡುವೆನೆಂದು, ನಿಲ್ಲಿಸಿ ಕೊಂಡಿದ್ದೇನೆ. ನೀನು ಅವನ ದಂಡಿಗೆ ಹೋಗಿ, ಆ ದಂಡಿನಲ್ಲಿ ಸಕಲವಾದ ಪ್ರಾಣಿಗಳಿಗೂ, ಅವರ ಅಭಿಷ್ಟವಿದ್ದಂತೆ ಅನ್ನ, ಪಾನ, ವಸ್ತ್ರಾಭರಣ, ಗಂಧ, ಮಾಲ್ಯಾದಿಗಳಿಂದ ತೃಪ್ತಿ ಪಡಿಸ ಬೇಕೆಂದು, ಅಪ್ಪಣೇ ಕೊಟ್ಟನು. ಆ ಸುರಭಿಯು ಚಕ್ರವರ್ತಿಯ ದಂಡಿಗೆ ಬಂದು, ಕುದುರೆ, ಆನೆ, ಒಂಟೆ, ಎತ್ತು, ದನ, ಕರು, ಮೊದಲಾಗಿ ಸಮಸ್ತ ಪ್ರಾಣಿಗಳಿಗೂ, ಅವರವರಿಗೆ ಬೇಕಾದ ಪದಾರ್ಥಗಳನ್ನು ಒದಗಿಸಿ ಕೊಟ್ಟು, ಅವರವರ ಶುಶ್ರೂಷೆಯನ್ನು ಮಾಡುವದಕ್ಕೆ ಅನೇಕ ಸಹಸ್ರ ದಾಸೀ ದಾಸ ಜನರನ್ನು ಉಂಟು ಮಾಡಿ, ಕಾರ್ತ್ತಿವೀರ್ಯಾರ್ಜುನಿನಿಗೂ, ಆತನ ಜೊತೆಯಲ್ಲಿ ಬಂದಿದ್ದ ಸಾಮಂತ ಮಂಡಲಿಗೂ, ಅನೇಕ ವಿಧವಾದ ರಾಜೋಪಚಾರಗಳಿಂದ ತೃಪ್ತಿ ಪಡಿಸಿ, ಸರ್ವರನ್ನು ಸಂತೋಷ ಪಡಿಸಿ, ತಿರಿಗಿ ಮುನಿಯ ಬಳಿಗೆ ಬಂದು, ತಾನು ನಡ ಕೊಂಡ ವಿದ್ಯಮಾನವನ್ನು ತಿಳಿಸಿ, ಅವರ ಸನ್ನಿಧಿಯಲ್ಲಿ ನಿಂತು ಕೊಂಡಿತು.

ಆ ಮೇಲೆ ಕಾರ್ತ್ತಿವೀರ್ಯಾರ್ಜುನನು—ಒಬ್ಬ ಅರಣ್ಯವಾಸಿಯಾದ ಬಡ ಮುನಿಯು ನಮ್ಮ ಇಷ್ಟು ಸೇನೆಗೂ ತೃಪ್ತಿಯಾಗುವಂತೆ ರಾಜೋಪಚಾರಗಳನ್ನು ಮಾಡಿಸಿದನಲ್ಲ! ಹೀಗೆ ಯಾವ ಸಂಬ್ರಾಜ್ಯಾಧಿಪತಿಯಾದರೂ ಮಾಡಿಯಾನೇ? ಆಗಲಾರದು. ಇದೆಲ್ಲಾ ಆ ಧೇನುವಿನ ಸಾಮರ್ಥ್ಯವು; ಅದನ್ನು ನಾನು ತೆಗೆದು ಕೊಂಡು ಹೋದರೆ, ನನ್ನ ಚಕ್ರವರ್ತಿತ್ವವು ಬಹಳ ಪ್ರಸಿದ್ಧಿಯಾಗುವದೆಂದು ಎಣಿಸಿ, ಜಮದಗ್ನಿಯ ಬಳಿಗೆ ಬಂದು,—ಎಲೈ, ಮುನಿಯೇ, ಈಗ ನೀನು ಮಾಡಿಸಿದ ಸತ್ಕಾರದಿಂದ ನಾನೂ ನನ್ನ ಪರಿವಾರಗಳೂ ಬಹಳ ಸಂತುಷ್ಟರಾದೆವು. ಆದರೆ ನನ್ನದೊಂದು ಮಾತು ಇರುವದು; ಕೇಳು. ನಿನ್ನಲ್ಲಿರುವ ಸಕಲಾಭೀಷ್ಟವನ್ನು ಮಾಡುವ ಈ ಹೋಮ ಧೇನುವನ್ನು ನನಗೆ ಕೊಡ ಬೇಕು. ಇದಕ್ಕೆ ಬದಲಾಗಿ ನೀನು ಕೇಳಿದಷ್ಟು ಧನ ಕನಕ ವಸ್ತ್ರಾಭರಣ ದೇಶ ಕೋಶಗಳನ್ನು ಕೊಡುತ್ತೇನೆ, ಎನ್ನಲು; ಜಮದಗ್ನಿಯು—ಇದನ್ನು ಕೊಡುವದಕ್ಕೆ ನಾನು

ಬಾಧ್ಯನಲ್ಲ. ಇದು ಬಹಳ ತಪಸ್ಸು ಮಾಡಿದಂಥ ಮುನಿಗಳಿಗೆ, ಅವರು ಮಾಡ
ತಕ್ಕ ಯಜ್ಞಕ್ಕೆ ಬೇಕಾದ ಹಾಲು, ಮೊಸರು, ಬೆಣ್ಣೆ, ತುಪ್ಪ, ಮೊದಲಾದ
ಸಾಮಗ್ರೀಯುಗಳನ್ನು ಒದಗಿಸಿ ಕೊಡ ತಕ್ಕ ಬಗ್ಯೆ, ದೇವೇಂದ್ರನ ಅಪ್ಪಣೆಯಿಂ
ದ ಮುನಿಗಳು ಬಂದು, ಅವರು ಹೇಳಿದಂತೆ ನಡೆಯುವದು, ಎನ್ನಲು; ಕಾರ್ತ
ವೀರ್ಯಾರ್ಜುನನು—ಹಾಗಾದರೆ, ನಿನಗೆ ಕೊಡುವದಕ್ಕೆ ಸ್ವತಂತ್ರವಿಲ್ಲದಿದ್ದಲ್ಲಿ,
ನಾನೇ ಹಿಡಿದು ಕೊಂಡು ಹೋಗುವೆನೆಂದು ಹೇಳಿ, ಬಲಾತ್ಕಾರದಿಂದ ಆ ಸುರ
ಭಿಯನ್ನು ಹಿಡಿದು ಕೊಂಡು, ತನ್ನ ಪಟ್ಟಣಕ್ಕೆ ಹೋದನು.

ಇತ್ತ ಯಾಗ ಸಾಧಕವಾದ ಸಮಿತ್ತು ದರ್ಭೆಗಳನ್ನು ತರುವದಕ್ಕೆ ಹೋಗಿ
ದ್ದ ರಾಮನು ಅವುಗಳನ್ನೂ ಮತ್ತು ಗೋಗ್ರಾಸವನ್ನೂ ಹೊತ್ತು ಕೊಂಡು
ಬಂದು, ದರ್ಭೆ ಸಮಿತ್ತುಗಳನ್ನು ಯಾಗ ಶಾಲೆಯಲ್ಲಿಟ್ಟು, ಗೋಗ್ರಾಸವನ್ನು
ತೆಗೆದು ಕೊಂಡ, ಗೋವು ಇರುವ ಬಳಿಗೆ ಹೋಗಿ, ನೋಡಲು; ಅಲ್ಲಿ ಗೋವು
ಇಲ್ಲದೆ ಇದ್ದ ಕಾರಣ ಜಮದಗ್ನಿಯ ಬಳಿಗೆ ಬಂದು,—ಎಲೈ, ತಂದೆಯೇ,
ನಾನು ಗೋವಿಗೋಸ್ಕರ ಎಳೇ ಹುಲ್ಲನ್ನು ಬಹಳವಾಗಿ ತಂದಿದ್ದೇನೆ; ಗೋವು
ಎಲ್ಲಿ? ಕಾಣುವದಿಲ್ಲವೆಂದು ಕೇಳಿದ್ದಕ್ಕೆ, ಆತನು ಗೋವಿನ ವಿಷಯದಲ್ಲಿ ಕಾ
ರ್ತವೀರ್ಯಾರ್ಜುನನು ಮಾಡಿದಂಥ ಬಲಾತ್ಕಾರದ ಸಂಗತಿಯನ್ನು ತಿಳಿಸಿದನು.
ಅದನ್ನು ಕೇಳಿ, ಪರಶು ರಾಮನು—ಅಕಟಕಟಾ! ನೀಚರಾದ ಅರಸುಗಳಿಗೆ ಬ್ರಾ
ಹ್ಮಣರ ಸ್ವತ್ತನ್ನು ಬಲಾತ್ಕಾರದಿಂದ ಅಪಹರಿಸಿ ಕೊಂಡು ಹೋಗುವ ಶಕ್ತಿ
ಉಂಟಾಯಿತೇ? ತನ್ನ ಚಕ್ರವರ್ತಿತನದ ಹೆಮ್ಮೆಯನ್ನು ನಮ್ಮಲ್ಲಿ ತೋರಿಸಿದನೇ?
ನಮ್ಮನ್ನು ಜಪ ತಪಾ ಮಾಡಿ ಕೊಂಡು, ಆಶ್ರಮದ ಎಲೆ ಮನೆಯಲ್ಲಿ ಸೇರಿ
ಕೊಂಡಿರುವ ಶುದ್ಧ ಬ್ರಾಹ್ಮಣರೆಂದು ತಿಳಿದನೇ? ಆಗಲಿ. ಇವನ ಶಕ್ತಿಯನ್ನು
ನೋಡುವ ಎಂದು, ಅಮೋಘವಾದ ಕವಚವನ್ನು ತೊಟ್ಟು ಕೊಂಡು, ಬಿಲ್ಲು,
ಬತ್ತಳಿಕೆ, ಕೊಡಲಿಗಳನ್ನು ಕೈಯಲ್ಲಿ ತೆಗೆದು ಕೊಂಡು, ಆ ಕ್ಷಣದಲ್ಲಿಯೇ
ಕೋಪದಿಂದ ಪರವಶನಾಗಿ, ಆಶ್ರಮದಿಂದ ಹೊರಟು, ಮಾಹಿಷ್ಮತೀ ನಗರ
ಕ್ಕೆ ಬಂದು, ಊರು ಬಾಗಲನ್ನು ಅತಿಕ್ರಮಿಸಿ, ಗೋಪುರ ದ್ವಾರವನ್ನು ದಾಟಿ,
ರಾಜ ದ್ವಾರದ ಬಳಿಗೆ ಬಂದು, ನಿಂತು, ಬಾಗಲ ಕಾಯುವವರನ್ನು ಕರೆದು,—
ಎಲೈ, ದ್ವಾರ ಪಾಲಕರಿರಾ, ನಿಮ್ಮ ಅರಸಿಗೆ ನಾವು ಹೇಳಿದ್ದಾಗಿ ಹೇಳ ತಕ್ಕ
ದ್ದೇನೆಂದರೆ,—ಲೋಕದಲ್ಲಿ ಜನರಿಗೆ ವಿನಾಶ ಕಾಲಕ್ಕೆ ವಿಪರೀತ ಬುದ್ಧಿಗಳು
ಹುಟ್ಟುವವೆಂದು, ದೊಡ್ಡವರು ಹೇಳುವದು ಈಗ ಯಥಾರ್ಥವಾಯಿತು. ಕರೆ
ದು, ನಮ್ಮ ತಂದೆಯು ನಿನಗೆ ಸತ್ಕಾರವನ್ನು ಮಾಡಿದ್ದಕ್ಕೆ—ಪಥ್ಯ ಇಕ್ಕಿ ಉ

ಣ್ಣಿಸಿದವರ ಕೈಯನ್ನು ಕಚ್ಚಿದನೆಂಬ ಗಾದೆಗೆ ಸರಿಯಾಗಿ ನಮ್ಮ ಹೋಮ ಧೇನುವನ್ನು ಬಲಾತ್ಕಾರದಿಂದ ಅಪಹರಿಸಿ ಕೊಂಡು ಬಂದೆಯಲ್ಲ! ಇದು ನ್ಯಾಯವೇ? ಸತ್ತ ದನವಿನ ಚರ್ಮದಲ್ಲಿ ಮಾಡಿದ ತಿದಿಯು ನಿಟ್ಟುಸುರುಗಳು ಪಂಚ ಲೋಹಗಳನ್ನು ಸುಟ್ಟು ಬೂದೀ ಮಾಡುವವು. ಹೀಗಿರುವಲ್ಲಿ ತಪಸ್ವಿಗಳಾಗಿಯೂ ತೇಜಸ್ವಿಗಳಾಗಿಯೂ ಇರುವ ಬ್ರಾಹ್ಮಣರ ಸಂತಾಪದ ಉಸುರುಗಳು ಆ ತಾಪವನ್ನು ಹುಟ್ಟಿಸಿದವನ ಕುಲ ಕೋಟಿಗಳನ್ನು ಸುಟ್ಟು, ಭಸ್ಮೀ ಭೂತವನ್ನು ಮಾಡದೆ ಇರುವವೇ? ಇಗೋ, ನಮ್ಮ ತಂದೆಯಾದ ಜಮದಗ್ನಿಗೆ ದ್ರೋಹವನ್ನು ಮಾಡಿ, ನಿಟ್ಟುಸುರುಗಳು ಹೊರಡುವ ಹಾಗೆ ಮಾಡಿದ ನಿನ್ನ ಪ್ರಾಣಗಳ ಉಸುರನ್ನೇ ನಿನ್ನ ಮೂಗಿನಲ್ಲಿ ಹೊರಡಿಸುವದಕ್ಕೆ ಆ ಋಷಿಯ ಹೊಟ್ಟೆಯಲ್ಲಿ ಹುಟ್ಟಿದ ಪರಶು ರಾಮನೆಂಬ ನಾನು ಬಂದಿದ್ದೇನೆ. ನಿನಗೆ ಪುತ್ರ ಮಿತ್ರ ಕಳತ್ರಾದಿಗಳೊಡನೆ ಕೂಡಿ, ಬಾಳ ಬೇಕೆಂಬ ಅಪೇಕ್ಷೆ ಇದ್ದರೆ, ಬೇಗ ನಮ್ಮ ಧೇನುವನ್ನು ತಂದು, ಒಪ್ಪಿಸಿ, ಶರಣಾಗತನಾದರೆ, ಮನ್ನಿಸಿ, ಬಿಡುವೆನು. ಅದು ನಿನ್ನ ಮನಸ್ಸಿಗೆ ಬಾರದೆ, ಸಾಯ ಬೇಕೆಂದು ಆಶೆ ಇದ್ದರೆ, ನಿನ್ನ ಚತುರಂಗ ಬಲದೊಡನೆ ಕೂಡಿ, ನಮ್ಮೊಡನೆ ಯುದ್ಧಕ್ಕೆ ಬರ ಬೇಕೆಂದು, ನಾನು ಕರೆಯುವದಾಗಿ ಹೇಳಿರೆಂದು, ಕಳುಹಿಸಲು; ಅವರು ಬಂದು, ಕಾರ್ತ್ತವೀರ್ಯಾರ್ಜುನನೊಡನೆ ಪರಶು ರಾಮ ಹೇಳಿದ ಹಾಗೆಯೇ, ತುಸವಾದರೂ ಹೆಚ್ಚು ಕಡಿಮೆ ಆಗದಂತೆ ಹೇಳಲು;—

ಅದನ್ನು ಕೇಳಿ, ಕಾರ್ತ್ತವೀರ್ಯಾರ್ಜುನನು—ಅಹಹ! ತಿಥಿಗಳಲ್ಲಿ ಮಂಡಿಸಿ, ಕುಳಿತು ಕೊಂಡು, ತಿನ್ನುತ್ತಾ, ಹೊಟ್ಟೇ ಹೊರೆಯುವ ಬಡ ಹಾರುವರಿಗೆ ಪರಮ ತೇಜಸ್ವಿಗಳಾದ ಚಕ್ರವರ್ತ್ತಿಗಳಾದ ನಮ್ಮಂಥ ಕ್ಷತ್ರಿಯೋತ್ತಮರೊಡನೆ ಸೆಣಸುವ ಶಕ್ತಿ ಉಂಟಾದದ್ದು ಇದೇನೋ? ಕಾಲಗತಿಯೇ ಸರಿ. ಈ ದುಷ್ಟ ಬ್ರಾಹ್ಮಣ ವಟುವಿನ ಕೆಟ್ಟ ಮಾತುಗಳಿಂದ ನಾನು ಯುದ್ಧಕ್ಕೆ ಹೋದರೆ, ಆ ಯುದ್ಧದಲ್ಲಿ ಅವನು ಕೋಪಿತನಾದ ನನ್ನಿಂದ ಹತನಾದರೆ, ಬ್ರಹ್ಮ ಹತ್ಯ ಬಂದು ಘಟಿಸುವದು. ಅದಲ್ಲದೆ, ಬ್ರಾಹ್ಮಣನ ಸ್ವತ್ತು ನಮಗೇಕೆ? ಎಂದು, ಆ ಧೇನುವನ್ನು ಹಿಂದಕ್ಕೆ ಕೊಟ್ಟು ಬಿಟ್ಟರೆ,—ಚಕ್ರವರ್ತ್ತಿಯಾದ ಕಾರ್ತ್ತವೀರ್ಯಾರ್ಜುನನು ಹಿಡಿದು ತಂದ ಧೇನುವನ್ನು, ಹಾರವ ಹುಡುಗನೊಡನೆ ಜಗಳವಾಡುವದಕ್ಕೆ ಕೈಯಲ್ಲಿ ಹರಿಯದೆ, ಪೋರನ ಮಾತಿಗೆ ಬೆದರಿ, ಧೇನುವನ್ನು ತಿರಿಗಿ ಕೊಟ್ಟು ಬಿಟ್ಟನು, ಎಂದು ಆಡಿ ಕೊಳ್ಳುವರು. ಈ ಅಸಂಗತವಾದ ಕಾರ್ಯಕ್ಕೆ ಹ್ಯಾಗೆ ಮಾಡುವ? ಎಂದು, ಒಂದು ಘಳಿಗೆ ಆಲೋಚಿಸಿ,—ಆ ಪೋರನನ್ನು ಕೊಂದು

ಹಾಕದೆ, ಅವನ ಕೊಬ್ಬು ಮುರಿದು, ಹಿಡಿದು ತಂದು, ಶೆರೆಯಲ್ಲಿಟ್ಟು, ಅವರಪ್ಪ ಜಮದಗ್ನಿಯು ಬಂದು, ಬೇಡಿ ಕೊಂಡರೆ, ಬಿಟ್ಟು ಬಿಡುವ ಎಂದು, ಮನಸ್ಸಿನಲ್ಲಿ ನಿಶ್ಚೈಸಿ ತನ್ನ ದಳ ಪತಿಗಳನ್ನು ಕರೆದು–ನೀವು ನಿಮ್ಮ ನಿಮ್ಮ ಸೇನೆಯಿಂದ ಕೂಡಿ, ಆ ಹಾರುವ ಪೋರನ ಬಳಿಗೆ ಹೋಗಿ, ಜಗಳವಾಡಿ, ಅವನನ್ನು ಕೈ ಶೆರೆ ಹಿಡಿದು ಕೊಂಡು ಬನ್ನಿ ಎಂದು, ಅಪ್ಪಣೇ ಕೊಟ್ಟು, ಕಳುಹಿಸಿದನು.

ಅವರು ಚತುರಂಗ ಬಲ ಸಮೇತರಾಗಿ ಬಂದು, ಪರಶು ರಾಮುನನ್ನು ಮುತ್ತಿ ಕೊಳ್ಳಲು; ಪರಶು ರಾಮನು ಬಂದ ಶತ್ರುವಿನ ಸೇನೆಯಲ್ಲಿ, ಹಿಂತಿರಿಗಿ ಹೋಗಿ, ಸುದ್ದಿ ಹೇಳುವದಕ್ಕೆ ಒಬ್ಬ ಉಳಿಯದಂತೆ ಎಲ್ಲರನ್ನು ತನ್ನ ಕೈ ಕೊಡಲಿಯಿಂದ ಕೊಂದು ಹಾಕಿದನು. ಆ ಸುದ್ದಿಯನ್ನು ಕಾರ್ತ್ತವೀರ್ಯಾರ್ಜುನನು ಕೇಳಿ, ಪ್ರಳಯಾಗ್ನಿಯಂತೆ ಕೋಪಿಸಿ ಕೊಂಡು, ತಾನೇ ಬಂದು, ಪರಶು ರಾಮನೊ ಡನೆ ಇಪ್ಪತ್ತೇಳು ದಿವಸ ಅಹೋ ರಾತ್ರಿಯಲ್ಲಿಯೂ ಯುದ್ಧವನ್ನು ಮಾಡಿ, ಕಡೆಗೆ ಆತನ ಕೊಡಲಿಯಿಂದ ಕಡಿಯಲ್ಪಟ್ಟ ತೋಳು ತಲೆಗಳುಳ್ಳವನಾಗಿ ನೆ ಲದಲ್ಲಿ ಒರಗಿದನು. ಅದನ್ನು ಕಂಡು, ಆ ಪಟ್ಟಣದ ಜನವೆಲ್ಲಾ ಘಾಬರಿಯಾಗಿ, ದಿಕ್ಕು ದಿಕ್ಕಿಗೆ ಓಡಿ ಹೋದರು. ಆಗ ಪರಶು ರಾಮನು ಅವನ ಅರಮನೆ ಯನ್ನು ಹೊಕ್ಕು, ಅಲ್ಲಿ ಕಟ್ಟಿರುವ ತನ್ನ ಹೋಮ ಧೇನುವನ್ನು ನೋಡಿ, ಅದರ ಮೈಯೆಲ್ಲಾ ತುರಿಸಿ, ಗೊಂತನ್ನು ಬಿಚ್ಚಿ, ಅಲ್ಲಿಂದ ತನ್ನ ಆಶ್ರಮಕ್ಕೆ ಬಂದನು. ಆ ಧೇನುವು ಕೂಡ ಆತನ ಹಿಂದು ಗಡೆಯಲ್ಲಿಯೇ ಆಶ್ರಮಕ್ಕೆ ಬಂತು. ಅದ ನ್ನು ನೋಡಿ, ಜಮದಗ್ನಿಯು ಮಗನನ್ನೂ ಧೇನುವನ್ನೂ ತಬ್ಬಿ ಕೊಂಡು, ಮುದ್ದಾಡಿ, ಬಹಳ ಸಂತೋಷ ಪಟ್ಟನು.

ಆ ಬಳಿಕ, ಇತ್ತ ಮಾಹಿಷ್ಮತೀ ಪಟ್ಟಣದಲ್ಲಿ ಕಾರ್ತ್ತವೀರ್ಯಾರ್ಜುನನ ಮಕ್ಕಳು ತಂದೆ ಸತ್ತು ಹೋದ್ದರಿಂದ ಬಹಳ ವ್ಯಸನ ಪಟ್ಟು ಕೊಂಡು,–ಒಬ್ಬ ಬ್ರಹ್ಮಚಾರಿ ಹುಡುಗನು ಬಂದು, ಮಹಾ ಶೂರನಾದ ಚಕ್ರವರ್ತ್ತಿಯಾದ ನಮ್ಮ ತಂದೆಯನ್ನು ಕೊಂದು ಹಾಕಿದನಲ್ಲ! ಇದಕ್ಕೆ ಬದಲಾಗಿ ನಾವೂ ಅವನ ತಂದೆ ಯನ್ನು ಕೊಂದು ಹಾಕಿದ ಹೊರ್ತು, ನಮ್ಮ ಅಳಲು ತೀರುವದಿಲ್ಲ. ಈ ಕೆಲಸ ಮಾಡುವದಕ್ಕೆ ಪರಶು ರಾಮನು ಆಶ್ರಮದಲ್ಲಿರುವಾಗ, ನಮಗೆ ಸಾಧ್ಯ ವಾಗುವದಿಲ್ಲ. ನಾವು ಮಾಡಿದ ಯೋಚನೆಯು ಸ್ವಲ್ಪ ತಿಳಿದಾಗ್ಯೂ, ಆ ಪರ ಶು ರಾಮನು ನಮ್ಮನ್ನು ಮೂಲೋತ್ಪಾಟನಾ ಮಾಡುವನು. ಅವನ ತಂದೆ ಯನ್ನು ನಾವು ಕೊಂದು ಹಾಕಿದ ಮೇಲೆ, ಆ ಪರಶು ರಾಮನು ನಮ್ಮನ್ನು ಕೊಂದರೂ, ಕೊಂದು ಕೊಳ್ಳಲಿ ಎಂದು, ತಮ್ಮ ಮನಸ್ಸಿನಲ್ಲಿ ನಿಶ್ಚೈಸಿ ಕೊಂ

ಡು, ಜಮದಗ್ನಿಯ ಆಶ್ರಮಕ್ಕೆ ಬಂದು, ಔತು ಕೊಂಡು, ಪರಶು ರಾಮನು ಆಶ್ರಮವನ್ನು ಬಿಟ್ಟು ಹೋಗುವ ಸಮಯವನ್ನು ನಿರೀಕ್ಷಿಸುತ್ತ ಇದ್ದು, ಒಂದು ದಿವಸ ಆ ರಾಮನು ಗೋಗ್ರಾಸಾರ್ಥವಾಗಿ ಹುಲ್ಲು ತರುವದಕ್ಕೆ ಕಾಡಿಗೆ ಹೋದದ್ದನ್ನು ತಿಳಿದು, ಜಮದಗ್ನಿಯ ಪರ್ಣ ಶಾಲೆಯನ್ನು ಹೊಕ್ಕು, ಕಣ್ಣು ಮುಚ್ಚಿ ಕೊಂಡು, ಯೋಗ ಧ್ಯಾನ ಪರನಾಗಿದ್ದ ಜಮದಗ್ನಿಯ ತಲೆಯನ್ನು ಕತ್ತಿಯಿಂದ ಕಡಿದು, ಓಡಿ ಹೋದರು.

ಆ ಬಳಿಕ ರಾಮನು ಗೋಗ್ರಾಸವನ್ನು ತೆಗೆದು ಕೊಂಡು, ಆಶ್ರಮಕ್ಕೆ ಬಂದು, ದುಃಖ ಪಡುತ್ತಲಿರುವ ತಾಯಿ ಮುಂತಾದವರನ್ನು ಕಂಡು, ವಿಸ್ಮಿತನಾಗಿ, ದುರಾತ್ಮರಾದ ಕಾರ್ತವೀರ್ಯಾರ್ಜುನನ ಮಕ್ಕಳು ಮಾಡಿದ ದುಷ್ಕೃತ್ಯವನ್ನು ಕೇಳಿ—ಅಕಟಕಟಾ! ಈ ಭೂಲೋಕದಲ್ಲಿ ಕ್ಷತ್ರಿಯರು ಬಹಳ ಉನ್ನತರಾಗಿ, ಸಜ್ಜನರನ್ನು ಬಾಧಿಸುತ್ತಾ ಇದ್ದಾರೆ. ಇವರ ಹುಟ್ಟನ್ನೇ ಕಿತ್ತು ಹಾಕಿ, ಈ ಭೂಮಂಡಲವನ್ನು ಬ್ರಾಹ್ಮಣರ ಸ್ವಾಧೀನಕ್ಕೆ ಕೊಡುವೆನು ಎಂದು, ಪ್ರಳಯಕಾಲದ ರುದ್ರನಂತೆ ಕೊಡಲಿಯನ್ನು ತೆಗೆದು ಕೊಂಡು, ಹೊರಟು, ಭೂಲೋಕದಲ್ಲಿರುವ ಒಂದು ಕ್ಷತ್ರಿಯ ಜಾತಿಯ ಪಿಳ್ಳೆಯನ್ನು ಬಿಡದೆ, ಇಪ್ಪತ್ತೊಂದು ಸಾರಿ ಕೊಡಲಿಯಿಂದ ಕಡಿದು, ಅವರ ರಕ್ತದ ನದೀ ಪ್ರವಾಹದಲ್ಲಿ ಮಿಂದು, ಆ ರಕ್ತೋದಕಗಳಿಂದಲೇ ತನ್ನ ಸತ್ತ ತಂದೆಗೆ ತರ್ಪಣವನ್ನು ಕೊಟ್ಟು, ಭೂಮಂಡಲವನ್ನೆಲ್ಲಾ ಕಶ್ಯಪರಿಗೆ ದಾನವಾಗಿ ಕೊಟ್ಟು—ತಾನಾ ಕೊಟ್ಟ ಭೂಮಿಯಲ್ಲಿ ತಾನಿರ ಬಾರದೆಂದು ಪಡುವಣ ಕಡಲಿನ ಬಳಿಗೆ ಬಂದು, ಸಮುದ್ರ ರಾಜನಿಗೆ ಹನ್ನೆರಡು ಗಾವುದ ಹಿಂದಕ್ಕೆ ಹೋಗುವ ಹಾಗೆ ಹೇಳಿ, ಅವನು ಬಿಟ್ಟು ಹೋದ ಸ್ಥಳದಲ್ಲಿ ಇರುವ ಮಹೇಂದ್ರ ಪರ್ವತದಲ್ಲಿ ತಪಸ್ಸು ಮಾಡಿ ಕೊಂಡಿದ್ದನು.

ಇತ್ತಲಾ ಕಶ್ಯಪ ಮುನಿಯು—ಪರಶು ರಾಮನು ದಾನವಾಗಿ ಕೊಟ್ಟ ಭೂಮಂಡಲವನ್ನು ಯಾರಿಗೆ ಕೊಡ ಬೇಕೆಂದು ಯೋಚಿಸುತ್ತ, ಲೋಕದಲ್ಲಿ ಯಾರಾದರೂ, ಕ್ಷತ್ರಿಯರಿದ್ದಾರೋ? ಎಂದು ಹುಡುಕುತ್ತ, ಅಯೋಧ್ಯಾ ಪಟ್ಟಣಕ್ಕೆ ಬಂದು, ಅಲ್ಲಿ ಪರಶು ರಾಮನ ಸಂಹಾರ ಕಾಲದಲ್ಲಿ ಒಬ್ಬ ಹತ್ತು ವರುಷದ ಗಂಡು ಹುಡುಗನಿಗೆ ಹೆಂಗಸರೆಲ್ಲಾ ಕೂಡಿ, ಹೆಣ್ಣು ವೇಷವನ್ನು ಹಾಕಿ, ಶೀರೆಯನ್ನು ಉಡಿಸಿ, ಮರಸಿ, ಇಟ್ಟದ್ದರಿಂದ ಈ ಭೂಮಂಡಲವನ್ನೆಲ್ಲಾ ಅವನಿಗೆ ಕೊಟ್ಟು, ತಪಸ್ಸಿಗೆ ಹೋದನು. ಆ ಸೂರ್ಯ ವಂಶದಲ್ಲಿ ಮಹಾ ವಿಷ್ಣುವು ತನ್ನ ಪೂರ್ಣಾಂಶದಿಂದ ರಾವಣ ಸಂಹಾರಾರ್ಥವಾಗಿ ರಾಮನಾಗಿ ಅವತರಿಸಿ, ಶಿವ ಧನುಸ್ಸನ್ನು ಮುರಿದು, ಸೀತೆಯನ್ನು ಮದುವೆಯಾಗಿ, ಬರುವ ದಾರಿಯಲ್ಲಿ ಪರಶು ರಾಮನು

ಆ ರಾಮನೊಡನೆ ಯುದ್ಧಕ್ಕೆ ನಿಂತು, ತನ್ನ ವಿಷ್ಣು ಅಂಶವನ್ನು ಆ ರಾಮನಲ್ಲಿ ಒಪ್ಪಿಸಿ, ತಪಸ್ಸಿಗೆ ಹೊರಟು ಹೋದನು. ಆ ಬಳಿಕ ಚಕ್ರ ರಾಜನು ಕಾರ್ತವೀರ್ಯಾರ್ಜುನನ ಜನ್ಮವನ್ನು ನೀಗಿ, ಅಹಂಕಾರವಡಗಿ, ವೈಕುಂಠವನ್ನು ಹೊಕ್ಕು, ಮಹಾ ವಿಷ್ಣುವಿಗೆ ನಮಸ್ಕರಿಸಿ,—ಎಲೈ, ಮಹಾತ್ಮನೇ, ನಾನು ಅಲ್ಪನು, ಹೆಮ್ಮೆಗಾರನು. ನಿನ್ನ ಪಾದದಲ್ಲಿ ನಾನು ಮಾಡಿದ ಅಪರಾಧವನ್ನು ಕ್ಷಮಿಸಿ, ನನ್ನನ್ನು ಮನ್ನಿಸ ಬೇಕೆಂದು ಬೇಡಿ ಕೊಂಡದರಿಂದ, ಕರುಣಾಳುವಾದ ವಿಷ್ಣುವು ಮನ್ನಿಸಿ, ಯಥಾ ಪ್ರಕಾರ ತನ್ನ ಬಲಗೈಯಲ್ಲಿ ಧರಿಸಿ ಕೊಂಡನು.

### 81. The Seventh or Rama Incarnation. See Page 281—475.

### ೮೧. ರಾಮಾವತಾರದ ಕಥೆ. ಪಕ್ಕೆ ೨೮೧—೪೭೫.

### 82. The Eighth or Krishna Incarnation.

### ೮೨. ಕೃಷ್ಣಾವತಾರದ ಕಥೆ.

ದ್ವಾಪರ ಯುಗದಲ್ಲಿ ಧರಣೀ ದೇವಿಯು, ದುಷ್ಟರಾದ ದಾನವರೂ ದೈತ್ಯರೂ ಧರಣೀ ಪಾಲಕರೂ ಇವರ ಭಾರವನ್ನು ಸಹಿಸಲಾರದೆ, ತನ್ನನ್ನು ಸೃಷ್ಟಿಸಿದ ಚತುರ್ಮುಖ ಬ್ರಹ್ಮನ ಬಳಿಗೆ ಹೋಗಿ, ನಮಸ್ಕರಿಸಿ,—ಎಲೈ, ಸೃಷ್ಟಿ ಕರ್ತನೇ, ಈಗ ನನ್ನಲ್ಲಿ ಅನೇಕ ದುಷ್ಟರು ಹುಟ್ಟಿದ್ದಾರೆ. ಅವರ ಭಾರವನ್ನು ನಾನು ಸಹಿಸಲಾರೆನು. ಅವರನ್ನು ನಿಗ್ರಹಿಸಿ, ನನಗೆ ಭಾರವು ತಪ್ಪುವ ಹಾಗೆ ಮಾಡ ಬೇಕೆಂದು ಬೇಡಿ ಕೊಳ್ಳಲು; ಆತನು ಆ ಭೂಮಿಯನ್ನು ಕರೆದು ಕೊಂಡು, ಸಕಲ ದೇವ ಗಣ ಸಮೇತನಾಗಿ ಕ್ಷೀರ ಸಮುದ್ರವನ್ನು ಸೇರಿ, ಶ್ರೀ ಮಹಾ ವಿಷ್ಣುವನ್ನು ಅನೇಕ ವಿಧವಾಗಿ ಸ್ತುತಿಸಿ,—ದುಷ್ಟರಿಂದ ಧರಣಿಗೆ ಉಂಟಾಗಿರುವ ಭಾರವನ್ನು ಪರಿಹರಿಸ ಬೇಕೆಂದು, ಬೇಡಿ ಕೊಂಡನು.

ಆಗ ಗರುಡಾರೂಢನಾಗಿ ಶ್ರೀ ಮಹಾ ವಿಷ್ಣುವು ಬ್ರಹ್ಮಾದಿಗಳಿಗೆ ಪ್ರತ್ಯಕ್ಷನಾಗಿ, ಮುಗುಳು ನಗೆಯಿಂದ ಕೂಡಿ, ಆ ಬ್ರಹ್ಮನನ್ನು ಕುರಿತು—ಎಲೈ, ಬ್ರಹ್ಮನೇ, ನಾನು ಅನೇಕ ಅವತಾರಗಳನ್ನು ಮಾಡಿ, ಕೃತ ಯುಗದಲ್ಲಿ ಕೊಂದು ಹಾಕಿದಂಥ ದೈತ್ಯ ದಾನವರೂ, ತ್ರೇತಾ ಯುಗದಲ್ಲಿ ಸಂಹರಿಸಿದ ದೈತ್ಯರೂ, ಈ ಯುಗದಲ್ಲಿ ತಿರಿಗಿ ಹುಟ್ಟಿ, ಭೂಮಿ ಭಾರಕರಾಗಿರುವದನ್ನು ನಾನು ಬಲ್ಲೆನು. ನಿಮಗೆ ಹೇಳುವೆನು; ಕೇಳಿ.—ಕಾಲನೇಮಿ ಎಂಬ ದೈತ್ಯನು ಕಂಸಾಸುರನಾಗಿಯೂ, ವರಹಾವತಾರದಲ್ಲಿ ನನ್ನ ಸಮ್ಮಂಧದಿಂದ ಭೂಮಿಗೆ ಉಂಟಾದ ಮಗನು ನರಕಾಸುರನಾಗಿಯೂ, ಕುಂಭ ಕರ್ಣನು ದಂತವಕ್ರನಾ

ಗಿಯೂ, ರಾವಣನು ಶಿಶುಪಾಲನಾಗಿಯೂ, ನಾನು ರಸಾತಲಕ್ಕೆ ಮೆಟ್ಟಿದ ಬಲಿಚಕ್ರವರ್ತಿಯ ಮಗನು ಬಾಣಾಸುರನಾಗಿಯೂ, ಇನ್ನೂ ಅನೇಕ ದೈತ್ಯರು ಸಾಲ್ವ ಮಗಧಾದಿ ದುಷ್ಟರಾಗಿ ಹುಟ್ಟಿರುವರು. ದ್ವಾದಶಾದಿತ್ಯರ ತಾಯಿ ತಂದೆಗಳಾದ ಅದಿತಿಯೂ ಕಶ್ಯಪನೂ ವರುಣನ ಶಾಪದಿಂದ ವಸುದೇವನೆಂದೂ, ದೇವಕೀ ದೇವಿ ಎಂದೂ, ಹುಟ್ಟಿ, ಗಂಡ ಹೆಂಡರಾಗಿರುವರು. ಅವರಿಗೆ—ನಾನು ಮಗನಾಗಿ ಹುಟ್ಟುವೆನೆಂದು ಮೊದಲು ವರವನ್ನು ಕೊಟ್ಟಿರುವೆನು. ಅದೇ ಪ್ರಕಾರ ಅವರಿಗೆ ಮಗನಾಗಿ ಅವತರಿಸಿ, ಕಂಸಾದಿಗಳನ್ನು ಕೊಲ್ಲುವೆನು. ನೀವೆಲ್ಲರು ದೇವತೆಗಳ ಅಂಶದಿಂದ ನನಗೆ ಸಹಾಯರಾಗಿ ಹುಟ್ಟಿರಿ, ಎಂದು ಹೇಳಿ, ಅಭಯವನ್ನು ಕೊಟ್ಟು, ಕಳುಹಿಸಲು; ಅವರೆಲ್ಲರು ತಮ್ಮ ತಮ್ಮ ಲೋಕಗಳನ್ನು ಶೇರಿದರು.

ಇತ್ತಲು, ಆರ್ಯಾವರ್ತವೆಂಬ ಪುಣ್ಯ ದೇಶದಲ್ಲಿ ಮಥುರಾ ಪುರವೆಂಬ ಪಟ್ಟಣದಲ್ಲಿ ಧರ್ಮದಿಂದ ರಾಜ್ಯ ಭಾರವನ್ನು ಮಾಡುತ್ತಿದ್ದ ಯದು ವಂಶೋತ್ಪನ್ನನಾದ ಉಗ್ರಸೇನನಿಗೆ ಕ್ಷೀರ ಸಮುದ್ರದಲ್ಲಿ ವಿಷವು ಹುಟ್ಟಿದಂತೆ ಕಂಸನೆಂಬ ಒಬ್ಬ ದುಷ್ಟ ಮಗನು ಹುಟ್ಟಿ, ಯೌವನವನ್ನು ಹೊಂದಿ, ಪರಾಕ್ರಮ ಶಾಲಿಯಾಗಿ, ದುರ್ಮಾರ್ಗನಾದದರಿಂದ, ತಂದೆಯಾದ ಉಗ್ರಸೇನನನ್ನು ನಿರ್ಬಂಧಿಸಿ, ತಾನೇ ರಾಜ್ಯ ಭಾರವನ್ನಾಳುತ್ತ, ದುಷ್ಟರಿಗೆ ಸಂತೋಷಕರನಾಗಿಯೂ, ಶಿಷ್ಟರಿಗೆ ಎದೇಶೂಲನಾಗಿಯೂ ಇರುತ್ತ, ದೇವಕೀ ದೇವಿ ಎಂಬ ತನ್ನ ತಂಗಿಯು ಪ್ರಾಯದವಳಾದದ್ದನ್ನು ನೋಡಿ, ವಸುದೇವನೆಂಬವನಿಗೆ ಅತಿ ಸಂಭ್ರಮದಿಂದ ಮದುವೆಯನ್ನು ಮಾಡಿ ಕೊಟ್ಟು, ನಾಗವಲ್ಲಿಯ ದಿವಸ ಆ ಮದವಣಿಗರನ್ನು ದಿವ್ಯ ರಥದ ಮೇಲೆ ಕೂರಿಸಿ, ತಾನೇ ಸಾರಥ್ಯವನ್ನು ಮಾಡುತ್ತ, ರಾಜ ಬೀದಿಯಲ್ಲಿ ಮೆರವಣಿಗೆಯನ್ನು ಮಾಡಿಸಿ ಕೊಂಡು, ಬಹಳ ಸಂತೋಷದಿಂದ ಬರುತ್ತಿದ್ದನು. ಆವಾಗ,—ಎಲೈ, ಬುದ್ಧಿ ಇಲ್ಲದ ಕಂಸನೇ, ಕಣ್ಣು ಕಾಣದೆ ಯಾಕೆ ಇಷ್ಟು ಸಂತೋಷ ಪಡುತ್ತೀ? ಈ ನಿನ್ನ ತಂಗಿಯಾದ ದೇವಕಿಯ ಹೊಟ್ಟೆಯಲ್ಲಿ ಎಂಟನೆಯ ಬಸುರಿನಲ್ಲಿ ನಿನ್ನನ್ನು ಕೊಂದು ಹಾಕುವ ಮಗನು ಹುಟ್ಟುವನು ಎಂದು, ಆಕಾಶ ವಾಣಿಯು ಕೇಳಿ ಬಂದದರಿಂದ ಈ ಕಂಸಾಸುರನು ಚಿಂತಾಕ್ರಾಂತನಾಗಿ, ಏನೂ ಮುಂತೋಚದೆ, ಕ್ರೂರ ಕರ್ಮಿಯಾದ್ದರಿಂದ—ಈ ದೇವಕಿ ಇದ್ದರಷ್ಟೆ ಮಕ್ಕಳು ಹುಟ್ಟುವದು! ಇವಳನ್ನೇ ಕಡಿದು ಹಾಕುವೆನೆಂದು ಕತ್ತಿಯನ್ನು ಹಿರಿಯಲು; ವಸುದೇವನು ವ್ಯಾಕುಲ ಚಿತ್ತನಾಗಿ, ಕಂಸನನ್ನು ಕುರಿತು—ಎಲೈ, ಪರಾಕ್ರಮಿಯೇ, ನೀನು ಇಂಥ ಒಳ್ಳೇ ಯದು ವಂಶದಲ್ಲಿ

ಹುಟ್ಟಿ, ಶೂರ ಪುರುಷನಾಗಿ, ಸ್ತ್ರೀ ಹತ್ಯಕ್ಕೆ ಎಳಸ ಬಹುದೇ? ಇದು ನಿನ್ನ
ವಿಕ್ರಮಕ್ಕೆ ಹೇಸಿಗೆಯಲ್ಲವೇ? ಇಂಥಾ ಕೆಲಸವನ್ನು ಬಿಡು. ಈಕೆ ಬೇರೆ ನಿನ್ನ
ನ್ನು ಕೊಲ್ಲುವದಿಲ್ಲವಷ್ಟೆ! ಈಕೆಯ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಷ್ಟೆ ನಿನ್ನ
ನ್ನು ಕೊಲ್ಲುವರು! ಆದ್ದರಿಂದ ಇವಳ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೆಲ್ಲಾ
ಹುಟ್ಟಿದ ಕ್ಷಣದಲ್ಲಿ ನಿನ್ನ ವಶಕ್ಕೆ ಕೊಡುವೆನು. ಅವುಗಳನ್ನು ನಿನ್ನ ಮನಸ್ಸಿಗೆ
ಬಂದ ಹಾಗೆ ಮಾಡಿ ಕೊಂಡು, ನೀನು ಬದುಕುವ ಸಂಗತಿ ನೋಡಿ ಕೊಳ್ಳ
ಬಹುದೆಂದು, ಸಾಮ ವಚನಗಳನ್ನು ಹೇಳಿದನು. ಕಂಸನು ಆ ಮಾತಿಗೆ ಒಪ್ಪಿ,
ಅವರನ್ನು ಕರೆದು ಕೊಂಡು, ಅರಮನೆಗೆ ಬಂದು, ಆ ವಸುದೇವ ದೇವಕಿಗ
ಳನ್ನು ಒಂದು ಅರಮನೆಯಲ್ಲಿ ಇರಿಸಿ, ಅವರು ಹೊರಗೆ ಹೊರಡದ ಹಾಗೆ
ಜಿಗಿಬಿಗಿಯಾಗಿ ಕಾವಲಿಟ್ಟು, ಅವಳು ಗರ್ಭಿಣಿಯಾಗಿ ಹೆತ್ತ ಕ್ಷಣದಲ್ಲಿಯೇ,
ತನಗೆ ಬಂದು ತಿಳಿಸುವಂತೆ ಆಪ್ತರನ್ನು ಇಟ್ಟು, ನಿಶ್ಚಿಂತನಾಗಿದ್ದನು. ಅಲ್ಲಿ ವಸು
ದೇವ ದೇವಕಿಗಳು ಪರಸ್ಪರ ಪ್ರೀತಿಯಿಂದ ಇರುತ್ತ ಇರುವಲ್ಲಿ, ಕೆಲವು
ಕಾಲದ ಮೇಲೆ ಆಕೆಯು ಗಂಡು ಮೊಗುವನ್ನು ಹೆತ್ತಳು. ಆ ಸುದ್ದಿಯನ್ನು
ಕಂಸನು ಕೇಳಿ, ಆ ಕ್ಷಣವೇ ಹೊಲೆಯ ಮನೆಯ ಬಳಿಗೆ ಬಂದು, ಆ ಶಿಶು
ವನ್ನು ತೆಗೆದು ಕೊಂಡು, ಕಾಲನ್ನು ಹಿಡಿದು, ಅರೇ ಬಂಡೆಯ ಮೇಲೆ ಬಡಿದು,
ಕೊಂದು ಹಾಕಿದನು. ಹೀಗೆ ಹುಟ್ಟಿದ ಆರು ಮಕ್ಕಳ ವರಿಗೂ ಕೊಂದು
ಹಾಕಿದನು.

ಇತ್ತಲಾ ಶ್ರೀ ಮಹಾ ವಿಷ್ಣುವು ಬ್ರಹ್ಮಾದಿ ದೇವತೆಗಳಿಗೆ ಅಭಯ ವಚ
ನವನ್ನು ಕೊಟ್ಟ ಪ್ರಕಾರ, ವಸುದೇವ ದೇವಕಿಯರಿಗೆ ಮಗನಾಗಿ ಹುಟ್ಟಿ, ದು
ಷ್ಟರನ್ನು ಸಂಹರಿಸ ಬೇಕೆಂದು ಎಣಿಸಿ, ಮೊದಲು ತನಗೆ ಹಾಸಿಗೆಯಾಗಿರುವ
ಮಹಾ ಶೇಷನನ್ನು ನೋಡಿ,—ಎಲೈ, ಫಣಿ ರಾಜನೇ, ನೀನು ಈಗಲೇ ಭೂಲೋ
ಕಕ್ಕೆ ಹೋಗಿ, ಮಧುರಾ ಪುರಿಯಲ್ಲಿ ಇರುವ ವಸುದೇವನ ಹೆಂಡತಿಯಾದ ದೇ
ವಕೀ ದೇವಿಯ ಬಸುರನ್ನು ಹೊಗುವನಾಗು ಎಂದು ಅಪ್ಪಣೇ ಕೊಟ್ಟದ
ರಿಂದ, ಅವನು ಅದೇ ಪ್ರಕಾರ ನಡೆದು ಕೊಂಡನು. ಆ ಬಳಿಕ ತನ್ನ ನಿಜ ಮಾ
ಯೆಯನ್ನು ಕರೆದು—ಎಲೈ, ಮಾಯೆಯೇ, ಈಗ ನನ್ನ ಹಾಸಿಗೆಯಾದ ಮಹಾ
ಶೇಷನು ದೇವಕೀ ದೇವಿಯ ಗರ್ಭವನ್ನು ಹೊಕ್ಕು, ಅಲ್ಲಿ ಶಿಶುವಿನಾಕಾರದಿಂ
ದಿರುವನು. ಮೊದಲು ನೀನು ಅಲ್ಲಿಗೆ ಹೋಗಿ, ಆತನನ್ನು ದೇವಕೀ ದೇವಿಯ
ಬಸುರಿನಿಂದ ಶೆಳೆದು, ನಂದ ಗೋಕುಲದಲ್ಲಿರುವ ಆ ವಸುದೇವನ ಹಿರೀ ಹೆಂಡ
ತಿಯಾದ ರೋಹಿಣಿ ದೇವಿಯ ಹೊಟ್ಟೆಯಲ್ಲಿ ಇಟ್ಟು, ಆ ಮೇಲೆ ಅದೇ ಗೋಕು

ಲದಲ್ಲಿರುವ ನಂದಗೋಪನೆಂಬ ಗೊಲ್ಲರ ಒಡೆಯನ ಮಡದಿಯಾದ ಯಶೋದೆ ಎಂಬವಳ ಹೊಟ್ಟೆಯಲ್ಲಿ ಶ್ರಾವಣ ಬಹುಳ ಅಷ್ಟಮಿಯ ದಿವಸದ ಅರ್ಧ ರಾತ್ರಿಯಲ್ಲಿ ಹೆಣ್ಣು ಶಿಶುವಾಗಿ ಹುಟ್ಟು. ನೀನು ನನಗೆ ತಂಗಿಯಾಗುವದರಿಂದ, ದುರ್ಗಿ, ಚಾಮುಂಡಿ, ಪಾರ್ವತಿ, ಕಾತ್ಯಾಯನಿ, ಕಾಳಿ, ಎಂಬ ಇತ್ಯಾದಿ ಹೆಸರುಗಳನ್ನು ಧರಿಸಿ, ಶಿವನಿಗೆ ಹೆಂಡತಿಯಾಗಿ, ಕುರಿ, ಕೋಣ, ಕೋಳಿ, ಮುಂತಾದ ಪ್ರಾಣಿಗಳ ಬಲಿಯನ್ನು ನಿನಗೆ ಕೊಟ್ಟು, ಯಾರು ನಿನ್ನನ್ನು ಭಕ್ತಿಯಿಂದ ಪೂಜಿಸುವರೋ, ಅವರಿಗೆ ನೀನು ಬೇಕಾದ ಇಷ್ಟಾರ್ಥಗಳನ್ನು ಕೊಡುತ್ತ, ಲೋಕದ ಜನಗಳಿಂದ ಪೂಜಿಸಿ ಕೊಂಡು ಇರು ಎಂದು, ಅಪ್ಪಣೇ ಕೊಟ್ಟು, ಕಳುಹಿಸಲು; ಅವಳು ಅದೇ ಪ್ರಕಾರ ಮಧುರಾ ಪುರಿಗೆ ಬಂದು, ದೇವಕಿಯ ಬಸುರಿನಿಂದ ಶಿಶುವನ್ನು ಸೆಳೆದು, ರೋಹಿಣಿಯ ಗರ್ಭದಲ್ಲಿ ಹಾಕಿ, ತಾನು ಯಶೋದೆಯ ಹೊಟ್ಟೆಯನ್ನು ಹೊಕ್ಕಳು.

ಇತ್ತಲಾ ಮಧುರಾ ಪುರದಲ್ಲಿ ದೇವಕೀ ದೇವಿಯು ಏಳನೇ ಬಸುರಾಗಿದ್ದು, ಮೈ ಇಳಿದಳು ಎಂದು ನೋಡಿದ್ದ ಹೆಂಗಸರು ತಿಳಿದು, ಕಂಸನಿಗೆ ಹೇಳಿದರು. ಆ ಬಳಿಕ ಕೆಲವು ದಿವಸದ ಮೇಲೆ, ಮಹಾ ವಿಷ್ಣುವು ಆ ದೇವಕೀ ದೇವಿಯ ಗರ್ಭವನ್ನು ಪ್ರವೇಶಿಸಲು; ಆಕೆಯು ಎಂಟನೇ ಬಸುರಾದಳೆಂದು ಕಂಸನಿಗೆ ಸುದ್ದಿ ಹುಟ್ಟಿ,—ಈ ಬಸುರಿನಲ್ಲಿ ಹುಟ್ಟುವ ಕೂಸೇ ನನ್ನನ್ನು ಕೊಲ್ಲುವಂಥಾದ್ದು. ಇದನ್ನು ಕೊಂದು ಬಿಟ್ಟರೆ, ನಾನು ಸುಖವಾಗಿರ ಬಹುದು ಎಂದು, ಮೊದಲಿಗಿಂತಲು ಬಹಳವಾಗಿ ಅವರ ಮೇಲೆ ಕಾವಲನ್ನು ಇಟ್ಟು, ತಾನೂ ಬಹು ಜಾಗರೂಕನಾಗಿ ವಿಚಾರಿಸಿ ಕೊಳ್ಳುತ್ತಾ ಇದ್ದನು.

ಇತ್ತಲಾ ನಂದ ಗೋಕುಲದಲ್ಲಿ ವಸುದೇವನ ಹಿರೀ ಹೆಂಡತಿಯಾದ ರೋಹಿಣೀ ದೇವಿಯು ಪರಿಪೂರ್ಣ ಗರ್ಭಿಣಿಯಾಗಿ, ಶುಭ ಮುಹೂರ್ತದಲ್ಲಿ ಮಹಾ ಶೇಷನು ಭಗವಂತನಿಗೆ ಸಹಾಯವಾಗಿ ಶಿಶು ರೂಪಿನಿಂದ ಶುಭ್ರ ವರ್ಣನಾಗಿ ಹುಟ್ಟಲು; ನೋಡಿದ ಸಮಸ್ತ ಜನರು—ಮೇಘ ಮಾರ್ಗದಲ್ಲಿ ದಿನ ಚರಿಯಲ್ಲಿಯೂ ನಡೆದು, ಅಲಸಿ, ವಿಶ್ರಮಿಸಿ ಕೊಳ್ಳುವದಕ್ಕಾಗಿ ಅಮೃತ ಕರನಾದ ಚಂದ್ರನು ಭೂಮಿಯಲ್ಲಿ ಈ ಕೂಸಾಗಿ ಹುಟ್ಟಿದನೆಂದು ಊಹಿಸುತ್ತಿದ್ದರು. ಆ ಮೇಲೆ ಮಧುರಾ ಪುರಿಯಲ್ಲಿ, ಶ್ರಾವಣ ಬಹುಳ ಅಷ್ಟಮೀ ದಿವಸ ಅರ್ಧ ರಾತ್ರಿಯಲ್ಲಿ, ಎಳ್ಳಗಸೇ ಹೂವಿನ ಹಾಗೆ ನೀಲವಾದ ಮೈ ಬಣ್ಣವುಳ್ಳವನಾಗಿ, ಹೊಂಬಟ್ಟೆಯನ್ನು ಹೊದ್ದು, ಕೌಸ್ತುಭ ರತ್ನದಿಂದ ಹೊಳೆಯುವ ಎದೆಯೂ, ಶಂಖ, ಚಕ್ರ, ಗದಾ, ಪದ್ಮಗಳೆಂಬ ಆಯುಧಗಳಿಂದ ಒಪ್ಪಿರುವ ಕೈಗಳೂ, ಉಳ್ಳವ

ನಾಗಿ, ದೈತ್ಯರೆಂಬ ಕಾಡಿಗೆ ಕಾಡ್ಗಿಚ್ಚಾದ ಮಹಾ ವಿಷ್ಣುವು ಆ ವಸುದೇವ ದೇವಕಿಗಳಿಗೆ ಪ್ರತ್ಯಕ್ಷವಾಗಿ ಕಾಣಿಸಿ ಕೊಂಡನು.

ಆತನನ್ನು ನೋಡಿ, ವಸುದೇವನು ಸಂತೋಷ ಸಮುದ್ರದಲ್ಲಿ ಮುಳುಗಿ, ಕಣ್ಣುಗಳಲ್ಲಿ ಆನಂದ ಬಾಷ್ಪವನ್ನು ಸುರಿಸುತ್ತ, ಬಾರಿ ಬಾರಿಗೂ ಅಡ್ಡ ಬಿದ್ದು, ಹೊಗಳುತ್ತ, ಎದ್ದು, ಕೈ ಮುಗಿದು ನಿಂತು ಕೊಂಡು, ಮೈಯೊಳಗೆದ್ದ ರೋಮಾಂಚಗಳಿಂದ ಕೂಡಿ, ಆ ಮಹಾ ವಿಷ್ಣುವನ್ನು ಕುರಿತು ತಮಗೆ ಕಂಸನು ಮಾಡಿದ ದ್ರೋಹಗಳನ್ನೆಲ್ಲಾ ಹೇಳಿ ಕೊಳ್ಳಲು; ಕಮಲ ನಾಭನು ಕರುಣಾ ಸಾರ ಹೃದಯನಾಗಿ,—ಮೊದಲು ನಿಮಗೆ ಹುಟ್ಟಿದ ಆರು ಮಕ್ಕಳು ಪಾತಾಳ ಲೋಕದಲ್ಲಿರುವ ಹಿರಣ್ಯಕಶಿಪುವಿನ ಮಕ್ಕಳು. ಅವರು ನನ್ನ ಅಪ್ಪಣೆಯಿಂದಲೇ ನಿಮ್ಮಲ್ಲಿ ಹುಟ್ಟಿ, ಸತ್ತು ಹೋದರು. ಏಳನೇ ಬಸುರಿನಲ್ಲಿದ್ದ ಶಿಶುವನ್ನು ಕಂಸನು ಕೊಲ್ಲುವನೆಂಬ ಎಣಿಕೆಯಿಂದ ನಾನೇ ತೆಗಿಸಿ, ನಿನ್ನ ಹಿರೀ ಹೆಂಡತಿಯಾದ ರೋಹಿಣಿಯಲ್ಲಿ ನನ್ನ ಮಾಯೆಯಿಂದ ನಿಲ್ಲಿಸಿದೆನು. ಆ ಮಹಾತ್ಮನು ಗೋಕುಲದಲ್ಲಿ ಹುಟ್ಟಿರುವನು. ನನ್ನ ಒಡ ಹುಟ್ಟುಗಳಾದ ಶಿಶುಗಳನ್ನು ಕೊಂದು, ತನ್ನ ತಂದೆಯಾದ ಉಗ್ರಸೇನನನ್ನು ಬಂಧನದಲ್ಲಿರಿಸಿ, ನಿಮ್ಮನ್ನು ಹಿಂಸಿಸುತ್ತ, ಲೋಕ ಕಂಟಕನಾಗಿರುವ ಈ ಕಂಸನನ್ನು ಕೊಂದು ಹಾಕುವೆನು. ನೀನು ಶಿಶುವಾಗುವ ನನ್ನನ್ನು ಎತ್ತಿ ಕೊಂಡು ಹೋಗಿ, ನಂದ ಗೋಕುಲದಲ್ಲಿ ಒಂದು ಹೆಣ್ಣು ಕೂಸನ್ನು ಹೆತ್ತು. ನನ್ನ ಮಾಯೆಯಿಂದ ಜ್ಞಾನ ತಪ್ಪಿ ಬಿದ್ದಿರುವ ನಂದಗೋಪನ ಹೆಂಡತಿಯಾದ ಯಶೋದೆಯ ಮಗ್ಗುಲಲ್ಲಿ ಇಟ್ಟು, ಅಲ್ಲಿ ಹುಟ್ಟಿರುವ ಹೆಣ್ಣು ಶಿಶುವನ್ನು ತೆಗೆದು ಕೊಂಡು, ತಿರಿಗಿ ಬಂದು, ದೇವಕೀ ದೇವಿಗೆ ಕೊಡು. ಈ ಕೆಲಸವನ್ನು ಮಾಡುವ ನಿನ್ನನ್ನು ಒಬ್ಬರೂ ಅರಿಯದಂತೆ ವಿಷ್ಣು ಮಾಯೆಯು ಮಾಡುವದು, ಎಂದು ಹೇಳಿ, ಆ ದಿವ್ಯ ರೂಪವನ್ನು ಅಡಗಿಸಿ, ಶಿಶು ರೂಪವನ್ನು ಕೈ ಕೊಂಡು, ವಸುದೇವ ದೇವಕಿಗಳನ್ನು ತನ್ನ ಮಾಯೆಯಿಂದ ಮುಚ್ಚಲು; ಅವರು ಮಾಯಾವಿಷ್ಟರಾಗಿ,—ಈಗ ನಾವು ಯಾರೊಡನೆ ಮಾತಾಡಿದೆವು? ನಮಗೆ ಯಾರು ಉತ್ತರವನ್ನು ಕೊಟ್ಟರು? ಈ ಶಿಶು ಬೇರೆ ಅಲ್ಲ; ನಾರಾಯಣನೇ ಬಂದು, ನುಡಿದು ಹೋದನೋ?, ಏನೋ? ಎಂದು ಭ್ರಾಂತಿ ಗೊಂಡರು.

ಆ ಬಳಿಕ ವಸುದೇವನ ಕಾಲಿಗೆ ಕಂಸನು ಹಾಕಿದ್ದ ಸಂಕೋಲೆಯು ತನ್ನೊಳಗೆ ತಾನೇ ಕಳಚಿ, ನೆಲಕ್ಕೆ ಬಿದ್ದದರಿಂದ, ವಸುದೇವನು ಶಿಶುವನ್ನು ಬೇಗ ಎತ್ತಿ ಕೊಂಡು ಹೊರಡುವಲ್ಲಿ, ಕಾವಲುಗಾರರೆಲ್ಲರು ವಿಷ್ಣು ಮಾಯೆ

ಯಿಂದ ಮೋಹಿತರಾಗಿ, ಎಚ್ಚರವಿಲ್ಲದೆ ಬಿದ್ದಿದ್ದರು. ಅಗಣಿಗಳು ಹಾಕಿದ್ದ ಊರುಬಾಗಿಲ ಕದಗಳು ತನ್ನೊಳಗೆ ತಾವೇ ತೆರೆದವು. ಆಕಾಶವು ಮೇಘಗಳಿಂದ ತುಂಬಿ, ತುಂತುರು ಹನಿಗಳನ್ನು ಸುರಿಸುತ್ತಿತ್ತು. ಈ ಪ್ರಕಾರವಾದ ಅದ್ಭುತ ವ್ಯಾಪಾರಗಳನ್ನು ನೋಡುತ್ತ, ಕಾರ ಕಗ್ಗತ್ತಲೆಯಲ್ಲಿ ಊರನ್ನು ಬಿಟ್ಟು, ಈಚೆಗೆ ಬರಲು; ಮಹಾ ಶೇಷನು ಬಂದು, ಮಗುವು ಮಳೆಯಿಂದ ನೆನೆಯದ ಹಾಗೆ ತನ್ನ ಸಾವಿರ ಹೆಡೆಗಳನ್ನು ವಸುದೇವನ ಮೇಲೆ ಕೊಡೆಯಾಗಿ ಹಿಡಿದು, ತನ್ನ ಹೆಡೆಗಳ ಮಾಣಿಕದ ಬೆಳಕಿನಿಂದ ಗೋಕುಲಕ್ಕೆ ಹೋಗುವ ದಾರಿಯನ್ನು ಚನ್ನಾಗಿ ಕಾಣಿಸುವ ಹಾಗೆ ಮಾಡಿದನು. ಆ ಮೇಲೆ ವಸುದೇವನು ವಿಷ್ಣುಮಾಯಾ ಶಕ್ತಿಯಿಂದ ಕ್ಷಣ ಮಾತ್ರದಲ್ಲಿ ಗೋಕುಲದ ಬಳಿಗೆ ಬಂದು, ಅಲ್ಲಿ ಎರಡು ಥಡವೂ ಕೂಡಿ ಉಬ್ಬಿ ಹರಿಯುವ ಯಮುನಾ ನದಿಯು ಕಾಲು ಹೊಳೆಯಾಗಿ, ದಾರಿಯನ್ನು ಕೊಡಲು; ಅದನ್ನು ದಾಟಿ, ನಂದಗೋಪನ ಹೆಂಡತಿ ಯಶೋದೆಯು ಹೆರುವ ಮನೆಯನ್ನು ಹೊಕ್ಕು, ಆ ಶಿಶುವನ್ನು ಅಲ್ಲಿಟ್ಟು, ಅಲ್ಲಿದ್ದ ಹೆಣ್ಣು ಶಿಶುವನ್ನು ಎತ್ತಿ ಕೊಂಡು, ಒಬ್ಬರೂ ಅರಿಯದಂತೆ ಯಮುನಾ ನದಿಯನ್ನು ದಾಟಿ, ಈಚೇ ಥಡಕ್ಕೆ ಬರುವದು, ಆ ನದಿಯು ಮೊದಲಿನಂತೆ ನೀರು ತುಂಬಿ ಹರಿಯಿತು. ಮತ್ತೆ ವಸುದೇವನು ಅಲ್ಲಿಂದ ಹೊರಟು, ಮಥುರಾಪುರಿಯನ್ನು ಹೊಗಲು; ಊರು ಬಾಗಿಲುಗಳ ಕದಗಳ ಅಗಣಿಗಳು ಮೊದಲಿನ ಹಾಗೆ ಹಾಕಿ ಕೊಂಡವು. ಅಲ್ಲಿಂದ ಅರಮನೆಯನ್ನು ಶೇರಿ, ಆ ಹೆಣ್ಣು ಶಿಶುವನ್ನು ತನ್ನ ಹೆಂಡತಿಯಾದ ದೇವಕೀ ದೇವಿಯ ಕೈಯಲ್ಲಿ ಕೊಟ್ಟು, ಕಳಚಿ ಹೋಗಿದ್ದ ಸಂಕೋಲೆಯನ್ನು ತೆಗೆದು, ತನ್ನ ಕಾಲುಗಳಿಗೆ ಕೂಡಿಸಿ ಕೊಳ್ಳುವಾಗ, ಅದು ಯಥಾ ಪ್ರಕಾರ ಶೇರಿ ಕೊಂಡಿತು.

ಅತ್ತ ಯಶೋದೆ ಎಚ್ಚತ್ತು, ಗಂಡು ಶಿಶುವನ್ನು ನೋಡಿ, ಸಂತೋಷ ಪಟ್ಟಳು. ಇತ್ತ ಆ ಹೆಣ್ಣು ಕೂಸು ಆರ್ಭಟಿಸಿ ಅಳುವದನ್ನು ಕೇಳಿ, ಕಾವಲುಗಾರರೆಲ್ಲರು ಎಚ್ಚತ್ತು ಎದ್ದು, ಮಲಗಿದ್ದ ಕಂಸನನ್ನು ಎಬ್ಬಿಸಿ,—ದೇವಕೀ ಹೆತ್ತಳೆಂದು ಸುದ್ದಿಯನ್ನು ಮುಟ್ಟಿಸಲು; ಆತನು ಎಡವಿ ಬೀಳುವದನ್ನು ಕಾಣದೆ, ಬೇಗನೆ ಓಡಿ ಬಂದು, ಆ ಹೆಣ್ಣು ಶಿಶುವನ್ನು ಶೆಳೆದು ಕೊಂಡು, ವಧ್ಯ ಸ್ಥಾನದ ಅರೇ ಬಂಡೆಯ ಬಳಿಗೆ ಬಂದು, ಶಿಶುವಿನ ಎರಡು ಕಾಲುಗಳನ್ನು ಕೈಯಲ್ಲಿ ಹಿಡು ಕೊಂಡು, ಬಂಡೆಯ ಮೇಲೆ ಬಡಿಯುವದಕ್ಕೆ ಎತ್ತಲು; ಆ ಶಿಶುವು ಇವನ ಕೈಯಿಂದ ನುಣುಚಿ ಕೊಂಡು, ಆಕಾಶಕ್ಕೆ ಹಾರಿ, ಅಲ್ಲಿ ದುರ್ಗಿಯ ಸ್ವರೂಪವನ್ನು ಧರಿಸಿ, ಎಂಟು ತೋಳುಗಳುಳ್ಳವಳಾಗಿ, ಅಟ್ಟಹಾಸವನ್ನು ಮಾಡಿ—ಎಲೈ,

ಹೆಡ್ಡನಾದ ಕಂಸನೇ, ನಾನು ನಿನ್ನ ಪ್ರಾಣವನ್ನು ಕೊಲ್ಲುವವಳಲ್ಲ; ನಿನ್ನ ಪ್ರಾಣಕ್ಕೆ ಮುನಿಯುವವನು ಭೂಮಿಯಲ್ಲಿ ಹುಟ್ಟಿ, ಬೆಳೆಯುತ್ತಿದ್ದಾನೆ, ಎಂದು ಹೇಳಿತು.

ಇತ್ತಲಾ ಕಂಸನು ದುರ್ಗಿಯ ಮಾತನ್ನು ಕೇಳಿ, ಬಹಳ ಆಶ್ಚರ್ಯ ಪಟ್ಟು, ಬಹು ಚಿಂತಾಕ್ರಾಂತನಾಗಿ,—ಅಯ್ಯೋ, ವ್ಯರ್ಥವಾಗಿ ಆಕಾಶ ವಾಣಿಯ ಸುಳ್ಳು ಮಾತನ್ನು ಕೇಳಿ, ತಂಗಿಯಾದ ದೇವಕೀ ದೇವಿಯನ್ನೂ ವಸುದೇವನನ್ನೂ ಬಹಳವಾಗಿ ಹಿಂಸಿಸಿ, ಅವರ ಶಿಶುಗಳನ್ನು ಕೊಂದೆನು ಎಂದು ಪಶ್ಚಾತ್ತಾಪ ಗೊಂಡು, ಅವರ ಬಳಿಗೆ ಹೋಗಿ, ಒಳ್ಳೇ ಮಾತುಗಳಿಂದ ಅವರನ್ನು ಸಮಾಧಾನ ಪಡಿಸಿ, ವಸುದೇವನ ಕಾಲುಗಳ ಸಂಕೋಲೆಯನ್ನು ತೆಗಿಸಿ, ಸೆರೆಯಿಂದ ಬಿಡಿಸಿ,—ಸುಖವಾಗಿರ್ರಿ ಎಂದು ಹೇಳಿ, ತಾನು ಏಕಾಂತದಲ್ಲಿ ಕುಳಿತು ಕೊಂಡು, ತನಗೆ ಬೇಕಾದ ಪೂತನಿ, ಶಕಟಾಸುರ, ಧೇನುಕಾಸುರ, ಪ್ರಲಂಬಾಸುರ, ಅರಿಷ್ಟಾಸುರ, ಕೇಶಿ, ಮೊದಲಾದವರನ್ನು ಕೂರಿಸಿ ಕೊಂಡು,—ನನ್ನ ಶತ್ರುವು ಒಂದು ಸ್ಥಾನದಲ್ಲಿ ಹುಟ್ಟಿರುವನಂತೆ. ನೀವೆಲ್ಲರು ಒಂದೊಂದು ನೆವದಿಂದ ಒಂದೊಂದು ವೇಷವನ್ನು ಹಾಕಿ ಕೊಂಡು, ಲೋಕದಲ್ಲೆಲ್ಲಾ ಕಡೆಯಲ್ಲಿಯೂ ತಿರುಗುತ್ತ, ಹುಟ್ಟಿರುವ ಶಿಶುಗಳನ್ನೆಲ್ಲಾ ಕೊಂದು ಹಾಕುತ್ತ, ಒಂದು ವೇಳೆಗೆ ತಪ್ಪಿಸಿ ಕೊಂಡ ಶಿಶುಗಳನ್ನು ಮತ್ತೊಂದು ವೇಳೆ ಕೊಲ್ಲುತ್ತ, ಹೀಗೆ ಈಗ ಲೋಕದಲ್ಲಿ ಹುಟ್ಟಿರುವ ಶಿಶುಗಳನ್ನೆಲ್ಲಾ ಕೊಂದಿಕ್ಕಿರಿ ಎಂದು ಹೇಳಿ, ಆತಂಕ ಹೃದಯನಾಗಿದ್ದನು.

ಹೀಗಿರುವಲ್ಲಿ, ಈ ಕಂಸನಿಗೆ ಕಟ್ಟಳೆಯ ಪ್ರಕಾರ ವರ್ಷ ವರ್ಷವು ಕೊಡುವ ಕಪ್ಪವನ್ನು ತೆಗೆದು ಕೊಂಡು, ಗೋಕುಲದಿಂದ ಬಂದು, ಕಪ್ಪವನ್ನು ಒಪ್ಪಿಸಿ, ಬಿಡಾರದಲ್ಲಿ ಇಳಿದು ಕೊಂಡಿರುವ ನಂದಗೋಪನ ಬಳಿಗೆ ವಸುದೇವನು ರಹಸ್ಯವಾಗಿ ಬಂದು,—ಎಲೈ, ಪ್ರಿಯನೇ, ನಿನ್ನ ಹೆಂಡತಿಯಾದ ಯಶೋದಾ ದೇವಿಯು ಗಂಡು ಮಗನನ್ನು ಹೆತ್ತಳು ಎಂಬ ಸುದ್ದಿಯನ್ನು ಕೇಳಿ, ನನಗೆ ಬಹಳ ಸಂತೋಷವಾಯಿತು. ಅಲ್ಲಿ ನನ್ನ ಹಿರೀ ಹೆಂಡತಿಯಾದ ರೋಹಿಣಿಯು ಹೆತ್ತಿರುವ ನನ್ನ ಮಗನನ್ನು ಕೂಡ ನಿಮ್ಮ ಮಗನ ಜೊತೆಯಲ್ಲಿ ಇವನೂ ಒಬ್ಬ ನಿಮ್ಮ ಮಗನೆಂದು ಎಣಿಸಿ, ನನ್ನ ಮಗನು ಪರಾಕ್ರಮಿಯಾಗುವ ವರಿಗೂ ಕಾಪಾಡ ಬೇಕೆಂದು ಹೇಳಲು; ನಂದಗೋಪನು ಬಹಳ ಸಂತೋಷ ಪಟ್ಟು, ವಸುದೇವನನ್ನು ಕುರಿತು—ಅದಕ್ಕೆ ಸಂದೇಹವೇ? ನನ್ನ ಮಗನಿಗಿಂತ ಹೆಚ್ಚಾಗಿ ನಿಮ್ಮ ಮಗನನ್ನು ಕಂಡು ಕೊಂಡಿರುವೆನು. ನೀವು ತುಸವಾದರೂ ನಿಮ್ಮ ಮ

ನಸ್ಸಿನಲ್ಲಿ ಅಂದೇಶ ಪಡ ಬೇಡಿರಿ, ಎಂದು ನಂಬುಗೆಯನ್ನು ಕೊಟ್ಟು, ಮನ್ನಿಸಿ, ಮನೆಗೆ ಕಳುಹಿಸಿ, ತಾನು ಕಂಸನ ಅಪ್ಪಣೆಯನ್ನು ತೆಗೆದು ಕೊಂಡು, ಗೋಕುಲಕ್ಕೆ ಬಂದು, ಯಶೋದಾ ರೋಹಿಣಿಯರ ಮಕ್ಕಳನ್ನು ನೋಡಿ, ಸಂತೋಷ ಪಟ್ಟು ಕೊಂಡಿದ್ದನು.

ಹೀಗಿರುವಲ್ಲಿ ಕಂಸನು ಕಳುಹಿಸಿದ್ದ ಪೂತನಿ ಎಂಬ ರಾಕ್ಷಸಿಯು ಯಶೋದೆಯ ಆಕಾರವನ್ನು ತಾಳಿ, ಆ ಯಶೋದೆಯು ಹೊರಗೆ ಹೋಗಿದ್ದ ವೇಳೆಯಲ್ಲಿ, ಹುಟ್ಟಿ ಆರು ದಿವಸವಾದ ಮಗುವನ್ನು ಎತ್ತಿ ಕೊಂಡು,—ವಿಷದ ಮೊಲೆಯನ್ನು ಉಣ್ಣಿಸಿ ಕೊಲ್ಲುವೆನು ಎಂದೆಣಿಸಿ, ಮೊಲೆಯನ್ನು ಉಣ್ಣ ಕೊಡಲು; ಆ ಬಾಲಕನು ಮೊಲೆಯ ತುದಿಯನ್ನು ಬಾಯಿಯಲ್ಲಿ ಕಚ್ಚಿ, ಅವಳ ನೆತ್ತರು ನೆಣ ಖಂಡಗಳನ್ನು ಹೀರಿ—ಓಹೋ, ಬಿಡು, ಬಿಡು! ಎಂದು ಒರಲುತ್ತ, ಕೆಳಗೆ ಬಿದ್ದ ಅವಳ ಜೀವವನ್ನು ಹೀರಿ ಬಿಟ್ಟನು. ಆಗ ಮಹಾ ಘೋರವಾದ ರಾಕ್ಷಸಿಯ ಆಕಾರದ ಹೆಣವನ್ನೂ, ಆ ಹೆಣದ ಮೊಲೆಯ ತೊಟ್ಟನ್ನು ತುದಿ ಬಾಯಿಯೊಳಗೆ ಇಟ್ಟು ಕಚ್ಚಿರುವ ಶಿಶುವನ್ನೂ, ಯಶೋದೆಯು ಕಂಡು, ಬೆದರಿ, ಬೆಜ್ಜರಗೊಂಡು, ಬೇಗ ಹೋಗಿ, ಮೊಗುವನ್ನು ಎತ್ತಿ ಕೊಂಡು, ಆ ರಾಕ್ಷಸಿಯ ಹೆಣವನ್ನು, ಗಂಡಗೆ ಹೇಳಿ ಹೊರಗೆ ಹಾಕಿಸಿ ಬಿಟ್ಟು, ಮಂತ್ರಜ್ಞರನ್ನು ಕರಿಸಿ, ಮೊಗುವಿಗೆ ಭೀತಿ ಶಂಕೆಯು ಪರಿಹರವಾಗುವ ಹಾಗೆ ಯಂತ್ರವನ್ನು ಕಟ್ಟಿಸಿ, ಮಂತ್ರಿಸಿ, ವಿಭೂತಿಯನ್ನು ಹಣೆಗೆ ಇಡಿಸಿದಳು. ನೆಂಟರಾದ ಮುದುಕಿಗಳು ಬಂದು, ಮೊಗುವನ್ನು ತೂಪಿರಿದು, ನೆಟ್ಟಿಗೆಗಳನ್ನು ಮುರಿದು, ಹರಸಿ ಹೋದರು. ಆ ಬಳಿಕ ವಸುದೇವನ ಅಪ್ಪಣೆಯಿಂದ ಯದು ವಂಶದ ಗಾರ್ಗ್ಯನೆಂಬ ಪುರೋಹಿತನು ವೇಷವನ್ನು ಮರಸಿ ಕೊಂಡು, ರಹಸ್ಯವಾಗಿ ಹನ್ನೆರಡನೇ ದಿವಸಕ್ಕೆ ಗೋಕುಲಕ್ಕೆ ಬಂದು, ರೋಹಿಣೀ ದೇವಕಿಯರ ಮಕ್ಕಳಿಗೆ ರಾಮ ಕೃಷ್ಣರೆಂಬ ಹೆಸರನ್ನಿಟ್ಟು, ಹರಸಿ ಹೋದನು. ಅನಂತರದಲ್ಲಿ ಯಶೋದೆಯು ನಂಟ ಇಷ್ಟರಾದ ಮುತ್ತೈದೆಯರನ್ನು ಕರಿಸಿ, ಬಾಯನಗಳನ್ನು ಕೊಟ್ಟು, ಚಿನ್ನದ ತೊಟ್ಟಿಲಿನಲ್ಲಿ ಮೊಗುವನ್ನು ಮಲಗಿಸಿ, ಉಡುಧಾರವನ್ನು ಕಟ್ಟಿ, ಜೋಗುಳವಾಡಿ, ಮೊಗುವಿಗೆ ತೊಟ್ಟಲಿಟ್ಟಳು. ಕೃಷ್ಣನು ಬೆಳೆದ ಕೆಲವು ದಿವಸಕ್ಕೆ ಅಕಾರಣವಾದ ನಗೆ ಅಳುವಿಕೆಗಳಿಂದಲೂ, ಉತ್ತಾನ ಶಯನದಿಂದಲೂ, ತಾಯಿ ತಂದೆಗಳನ್ನು ಸಂತೋಷ ಪಡಿಸುತ್ತ ಇದ್ದನು.

ಹೀಗಿರುವಲ್ಲಿ ಒಂದು ದಿವಸ ಯಶೋದೆಯು ಮೊಗುವನ್ನು ತೊಟ್ಟಿಲಿನಲ್ಲಿ ಮಲಗಿಸಿ, ಪರಿಚಾರಕಿಯನ್ನು ಕೂಡಿ ಕೊಂಡು, ಕಾಳಿಂದೀ ನದಿಗೆ ಹೋದ

ಕಾಲದಲ್ಲಿ ಶಕಟಾಸುರನು ನಂದಗೋಪನ ಮನೆಯಲ್ಲಿ ಇಟ್ಟಿರುವ ಗಾಡಿಯ ಭಂಡಿಯಲ್ಲಿ ಸೇರಿ ಕೊಂಡು—ತೊಟ್ಟಿಲಿನಲ್ಲಿ ಮಲಗಿರುವ ಮಗುವನ್ನು ಕೊಲ್ಲವೆನೆಂದು, ಆ ಭಂಡಿಯನ್ನು ತೊಟ್ಟಿಲ ಮೇಲೆ ತಳ್ಳಲು; ಆ ಭಂಡಿಗೆ ಮಗುವಿನ ಕಾಲ ಉಂಗುಟವು ತಗಲಿ, ಆ ಶಕಟಾಸುರನು ಸತ್ತು ಬಿದ್ದು, ಒಂದು ಪರ್ವತಾಕಾರದ ಹಾಗೆ ಅವನ ಹೆಣವು ಕಾಣಿಸಲು;—ಈ ಹಸು ಗೂಸಿನ ಸಾಹಸ ವೆಷ್ಟೋ! ಎಂದು,—ಕಂಡವರು ಆಶ್ಚರ್ಯ ಪಟ್ಟಾರು ಎನುತ್ತ, ಆ ಅಸುರನ ಹೆಣವನ್ನು ಹರಿಯು ಮಾಯವನ್ನು ಮಾಡಿ, ತೊಟ್ಟಿಲಲ್ಲಿ ಕಾಲ ಬೆರಳನ್ನು ಬಾಯಿಯಲ್ಲಿ ಇಟ್ಟುಕೊಂಡು, ಜೋಪುತ್ತ, ಆಡುತ್ತಿದ್ದನು. ಅಷ್ಟರಲ್ಲಿ ಗೋಪಿಯು ಬಂದು, ನುಚ್ಚುನುರಿಯಾಗಿರುವ ಭಂಡಿಯನ್ನು ನೋಡಿ—ಇದೇನು? ಈ ಭಂಡಿಯು ಇದ್ದ ಕಿದ್ದ ಹಾಗೆ ಹೀಗೆ ಚೂರಾಯಿತು! ಮಗು ಎಷ್ಟು ಹೆದರಿ ಕೊಂಡಿತೋ? ಎಂದು ಎತ್ತಿ ಕೊಂಡು, ತೂಪಿರಿದು, ಗಂಡನಿಗೆ ಹೇಳಿ, ಬಹಳವಾಗಿ ಶಾಂತಿ ಕರ್ಮಗಳನ್ನು ಮಗುವಿಗೆ ಮಾಡಿಸಿದಳು.

ಆ ಮೇಲೆ ಕೃಷ್ಣನು ಮನೆಯಲ್ಲಿ ನಿಲ್ಲದೆ, ಬೀದಿ ಬೀದಿಗೆ ಓಡಿ ಓಡಿ ಹೋಗುತ್ತಿರಲು; ಗೋಪಿಯು ಕೋಪ ಗೊಂಡು,—ಎಷ್ಟು ಹೇಳಿದರೂ, ಮನೇ ಬಿಟ್ಟು ಹೋಗುವದನ್ನು ಬಿಡುವದಿಲ್ಲವಲ್ಲಾ! ಎಂದು ಧಟ್ಟಿಸಿ, ಅವನ ಸೊಂಟಕ್ಕೆ ಒಂದು ಹಗ್ಗವನ್ನು ಕಟ್ಟಿ, ಆ ಹಗ್ಗದ ತುದಿಯನ್ನು ಒಂದು ಒರಳು ಕಲ್ಲಿಗೆ ಬಿಗಿದು, ಮನೇ ಕೆಲಸಕ್ಕೆ ಹೋಗಲು; ಕೃಷ್ಣನು ಆ ಒರಳನ್ನು ಎಳೆದು ಕೊಂಡು, ಹೊರಗೆ ಹೋಗಿ, ಬಾಗಲಿನ ಮುಂದೆ ಈ ಕುಬೇರನ ಇಬ್ಬರು ಮಕ್ಕಳು ನಾರದ ಮುನಿಯ ಶಾಪದಿಂದ ಮರ ರೂಪವಾಗಿರುವ ಎರಡು ಮತ್ತೀ ಮರಗಳ ನಡುವೆ ಹೋಗಲು; ಆ ಮರಗಳಿಗೆ ಈ ಒರಳು ಕಲ್ಲು ತಗಲಿ, ಎರಡು ಮರಗಳು ಬೇರು ಸಹಿತ ಮುರಿದು, ಬಿದ್ದವು. ಆ ವೇಳೆಯಲ್ಲಿ ಹೊರಗೆ ಹೋಗಿದ್ದ ನಂದಗೋಪನು ಬರುತ್ತಾ, ಬಿದ್ದಿರುವ ಆ ದೊಡ್ಡ ಮರಗಳನ್ನೂ, ಅದರ ನಡುವೆ ಆಡುತ್ತ ಒರಳು ಕಲ್ಲಿನಿಂದ ಕೂಡಿ, ಸೊಂಟದಲ್ಲಿ ಕಟ್ಟಿರುವ ಹಗ್ಗವುಳ್ಳ ಕೃಷ್ಣನನ್ನೂ ಕಂಡು, ಕೌತುಕಾನಂದ ಭರಿತನಾಗಿ ನೋಡುತ್ತಿರುವಷ್ಟರಲ್ಲಿಯೇ, ಮನೆಯಲ್ಲಿ ಯಶೋದೆಯು ಕಟ್ಟಿ ಹಾಕಿದ್ದ ಬಳಿಯಲ್ಲಿ ಕೃಷ್ಣನನ್ನು ಕಾಣದೆ, ಹೊರಗೆ ಓಡಿ ಬಂದು, ಬಿದ್ದಿರುವ ಮರಗಳ ಸಂದಿಯಲ್ಲಿರುವ ಕೃಷ್ಣನನ್ನು ಎತ್ತಿ ಕೊಂಡು, ಮುದ್ದಿಸಿ, ಮನೆಗೆ ಕರೆದು ಕೊಂಡು ಹೋದಳು.

ಹೀಗೆ ಕೆಲವು ದಿನಗಳು ಕಳೆದು, ಒಂದಾನೊಂದು ದಿವಸ ಬಲರಾಮನು ಬಂದು—ಕೃಷ್ಣನು ಬೀದಿಯ ಮಣ್ಣನ್ನು ತಿಂದನು ಎಂದು, ಗೋಪಿಯ ಸಂಗಡ ಚಾಡಿ ಹೇಳಲು; ಗೋಪಿ ದೇವಿಯು—ಏನೋ, ಮಣ್ಣು ತಿಂದಿಯಾ, ಕೃಷ್ಣಾ?

ಎಂದು ಧಟ್ಟಿಸಿ, ಕೇಳಿದ್ದಕ್ಕೆ–ಇಲ್ಲವಮ್ಮಾ; ಅಣ್ಣನು ನನ್ನ ಮೇಲೆ ಸುಳ್ಳು ಚಾಡಿ ಹೇಳುತ್ತಾನೆ; ನೋಡು ಎಂದು ಬಾಯಿಯನ್ನು ತೆರೆದು, ತೋರಿಸಲು; ಆ ಬಾಯಿಯೊಳಗೆ ಏಳು ಸಮುದ್ರಗಳೂ, ಏಳು ಕುಲಾಚಲಗಳೂ, ಏಳು ದ್ವೀಪಗಳೂ ಬೆರಸಿ, ಹದಿನಾಲ್ಕು ಲೋಕವು ಕಾಣ ಬಂದದರಿಂದ,–ಈತನು ಮಹಾ ವಿಷ್ಣುವು ಎಂದು ಆತನ ಮಾಯೆಯಿಂದ ಅರಿಯದೆ,–ಬಾಯಿಯನ್ನು ಮುಚ್ಚಿಕೋ ಎಂದು, ಸಮುದಾಯಿಸಿದಳು.

ಅಷ್ಟರ ಮೇಲೆ ನಂದಗೋಪನು ಮುದುಕರಾದ ಗೊಲ್ಲರನ್ನು ಕೂಡಿಸಿ ಕೊಂಡು,–ಈ ಗೋಕುಲದಲ್ಲಿ ನಮಗೆ ಏನೇನೋ ದೈವೀಕದ ತೊಂದರೆಗಳು ಸಂಭವಿಸಿವೆ. ಇಲ್ಲಿಯೇ ನಾವು ಇದ್ದರೆ, ಮುಂದೆಯೂ, ಹೀಗೆ ವಿಡಂಬರಗಳು ಉಂಟಾಗುವವು. ಇದಕ್ಕಿಂತ ಕಾಳಿಂದೀ ತೀರದ ಬೃಂದಾವನವೆಂಬ ಸ್ಥಳವು ಹುಲ್ಲು, ನೀರು, ಕಟ್ಟಿಗೆಗಳಿಂದ ನಮಗೂ, ನಮ್ಮ ದನ ಕರುಗಳಿಗೂ, ಬಹಳ ಕ್ಷೇಮವಾಗಿರುವದು, ಎಂದು ಹೇಳಿ, ಅವರನ್ನೆಲ್ಲಾ ಒಡಂಬಡಿಸಿ, ಗೋಕುಲದಲ್ಲಿರುವ ಪಳ್ಳಿಗಳನ್ನೆಲ್ಲಾ ಕಿತ್ತು, ಭಂಡಿಗಳ ಮೇಲೆ ಹೇರಿ ಕೊಂಡು, ದನ ಕರುಗಳನ್ನು ಅಟ್ಟಿ ಕೊಂಡು, ಬೃಂದಾವನಕ್ಕೆ ಬಂದು, ಅಲ್ಲಿ ಗೊಲ್ಲರ ಪಳ್ಳಿಗಳನ್ನು ಕಟ್ಟಿ ಕೊಂಡು, ಸುಖವಾಗಿದ್ದರು. ಹಾಗೆಯೇ ಕೃಷ್ಣನು ಕರುಗಳನ್ನು ಕಾಯುವ ಜೊತೆಯ ಹುಡುಗರ ಸಂಗಡ ತನ್ನ ಮನೆಯ ಕರುಗಳನ್ನು ಅಟ್ಟಿ ಕೊಂಡು ಮೇಯಿಸುವದಕ್ಕೆ ಹೋಗಿ, ಕಾಳಿಂದಿಯ ತೀರದಲ್ಲಿ ಎಳೇ ಹುಲ್ಲುಗಳನ್ನು ಮೇಯಿಸುತ್ತ, ಗೋಲಿ, ಗಜ್ಜುಗ, ಕಣ್ಣಾಮುಚ್ಚಾಲೆ, ಕುದುರೆ ಚಂಡು, ಪುಟ ಚಂಡು, ಲಗ್ಗೆ ಚಂಡು, ಮುಂತಾದ ಆಟಗಳನ್ನಾಡುತ್ತ, ಕಲ್ಲಿಯಲ್ಲಿರುವ ಮೊಸರನ್ನದ ಬುತ್ತಿಗಳನ್ನು ಉಣ್ಣುತ್ತ ಇರುವಲ್ಲಿ, ಒಂದಾನೊಂದು ದಿವಸ ಕರುಗಳನ್ನು ಅಟ್ಟಿ ಕೊಂಡು, ಮತ್ತೊಂದು ಕಾಳಿಂದಿಯ ಮಡುವಿನ ಬಳಿಗೆ ಮೇಯಿಸುವದಕ್ಕೆ ಹೋಗುತ್ತಿರುವಲ್ಲಿ, ಜೊತೆಯ ಹುಡುಗರು ಕಂಡು,–ಕೃಷ್ಣಾ, ಕೃಷ್ಣಾ! ಅಲ್ಲಿಗೆ ಕರುಗಳನ್ನು ಅಟ್ಟಿ ಕೊಂಡು ಹೋಗ ಬೇಡ. ಹೋದರೆ, ಕರುಗಳು ಸಹಿತ ನೀನು ಸತ್ತು ಹೋಗುವಿ. ಯಾಕಂದರೆ, ಈ ಮಡುವಿನಲ್ಲಿ ಕಾಳಿಯವೆಂಬ ಒಂದು ಘೋರ ಸರ್ಪವು ತನ್ನ ಕುಟುಂಬ ಸಮೇತವಾಗಿ ವಾಸಾ ಮಾಡಿ ಕೊಂಡು, ಸಂಚರಿಸುತ್ತ ಇರುವದು. ಅದರ ನಂಜಿನಿಂದ ಈ ಕಾಳಿಂದೀ ನೀರನ್ನು ಹನ್ನೆರಡು ಗಾವುದದ ವರಿಗೂ ಯಾವ ಪ್ರಾಣಿಗಳು ಕುಡಿದಾಗ್ಯೂ, ಆ ನೀರಿನ ಘಾಳಿ ಬೀಸಿದಾಗ್ಯೂ, ಸತ್ತು ಹೋಗುವವು. ಆದ್ದರಿಂದ ಮೃಗ ಪಕ್ಷಿಗಳು ಮುಂತಾದ ಒಂದು ಪ್ರಾಣಿಯೂ ಇಲ್ಲಿ ಸೇರುವದಿಲ್ಲವೆಂದು

ಹೇಳಿದರು. ಅದನ್ನು ಕೃಷ್ಣನು ಕೇಳಿ,–ಓಹೋ! ಹಾಗೋ? ಹಾಗಾದರೆ, ಈ
ಕೆಟ್ಟ ಹಾವನ್ನು ಇಲ್ಲಿಂದ ಓಡಿಸಿ, ಎಲ್ಲಾ ಪ್ರಾಣಿಗಳು ಈ ನೀರನ್ನು ಕುಡಿಯು
ವ ಹಾಗೆ ಮಾಡುವೆನೆಂದು, ಆ ಮಡುವಿಗೆ ಧೊಮ್ಮನೆ ಧುಮುಕಲು; ಆ ಕಾಳೀ
ಯ ಬಂದು, ಕೃಷ್ಣನನ್ನು ಸುತ್ತಿ ಕೊಂಡಿತು. ಆಗ ಕೃಷ್ಣನು ಅದರ ಬಾಲ
ವನ್ನು ಕೈಯಲ್ಲಿ ಹಿಡಿದು ಕೊಂಡು, ಅದರ ಹೆಡೆಯ ಮೇಲೆ ತನ್ನ ಎರಡು ಕಾ
ಲುಗಳನ್ನು ಊರಿ, ಕುಣಿಯುತ್ತ ಇದ್ದದರಿಂದ, ಇವನ ಭಾರವನ್ನು ಸಹಿಸಲಾ
ರದೆ, ಸಾಯುವ ಹಾಗಾಯಿತು. ಅಷ್ಟರೊಳಗೆ ಆ ಕಾಳೀಯ ನಾಗೇಂದ್ರನ
ಹೆಂಡರಾದ ನಾಗಕರ್ನಿಕೆಯರು ಬಂದು, ಕೃಷ್ಣನಿಗೆ ಅಡ್ಡ ಬಿದ್ದು, ಬಹಳವಾಗಿ
ಸ್ತೋತ್ರ ಮಾಡಿ,–ನಮ್ಮ ಗಂಡನನ್ನು ಕಾಪಾಡ ಬೇಕೆಂದು ಬೇಡಿ ಕೊಂಡು
ದ್ದಕ್ಕೆ, ಕೃಷ್ಣನು ಬಿಟ್ಟು,–ಇನ್ನು ಇಲ್ಲಿ ಇರದೆ, ಈ ಕ್ಷಣವೇ ನಿನ್ನ ಕುಟುಂಬ
ಸಮೇತನಾಗಿ ಸಮುದ್ರದಲ್ಲಿ ಹೋಗಿ ಶೇರಿಕೋ ಎಂದು ಅಪ್ಪಣೇ ಕೊಟ್ಟದ
ರಿಂದ, ಅದು ತನ್ನ ಸಂಸಾರ ಸಹಿತವಾಗಿ ಸಮುದ್ರಕ್ಕೆ ಹೋಯಿತು. ಈ ಆಶ್ಚ
ರ್ಯವನ್ನು ನಂದಗೋಪನೇ ಮೊದಲಾದ ಎಲ್ಲಾ ಗೊಲ್ಲರು ಕಂಡು,–ಈ ಮೊಗುವು
ಮೊಗು ಮಾತ್ರವಲ್ಲ, ದೈವೀಕದ ಮೊಗುವು ಎಂದು, ಒಬ್ಬರೊಬ್ಬರು ಮಾತಾ
ಡಿ ಕೊಂಡರು.

ಮತ್ತೊಂದು ದಿನದಲ್ಲಿ ಜೊತೆಯ ಹುಡುಗರೊಡನೆ ಶ್ರೀ ಕೃಷ್ಣನು ತನಗೆ
ದನಾ ಕಾಯುವ ಪ್ರಾಯವಾದ್ದರಿಂದ, ಕರುಗಳ ಕಾಯುವದನ್ನು ಬಿಟ್ಟು,
ದನಾ ಕಾಯುವವರ ಜೊತೆಯಲ್ಲಿ ಬಲರಾಮನೊಡನೆ ಕೂಡಿ, ತಮ್ಮ ದನಗ
ಳನ್ನು ಅಟ್ಟಿ ಕೊಂಡು, ಗೋವರ್ಧ ಗಿರಿಯ ತೊಪ್ಪಲಲ್ಲಿ ದನಗಳನ್ನು ಮೇಯಿ
ಸುತ್ತ, ಅದರ ಸಮೀಪದಲ್ಲಿರುವ ತಾಳಾ ವನವನ್ನು ಕಂಡು, ಜೊತೆಯ ಹುಡು
ಗರನ್ನು ಕರೆದು–ಈ ಓಲೇ ಮರಗಳ ಹಣ್ಣನ್ನು ಕೆಡವಿ, ತಿನ್ನೋಣ, ಬನ್ನಿ,
ಎಂದು ಹೇಳಲು; ಅವರೆಲ್ಲರು–ಅಯ್ಯೋ, ಅಪ್ಪಾ, ಆಗದಾಗದು. ಆ ಓಲೇ ವನ
ದಲ್ಲಿ ಉಂಟಾಗುವ ಹೆಂಡವು ನಿತ್ಯದಲ್ಲಿಯೂ ಕಂಸಾಸುರನ ಹೆಂಡರು ಕುಡಿ
ಯುವದಕ್ಕೆ ಸಾಗಿ ಹೋಗುವದು. ಆ ವನದಲ್ಲಿ ದೇನುಕನೆಂಬ ಕತ್ತೆಯ ರೂ
ಪಿನ ಒಬ್ಬ ರಾಕ್ಷಸನು ಇರುವನು. ಹಿಂದೆ ಒಂದು ವೇಳೆ, ಓಲೇ ಮರದ ಮ
ಧ್ಯವನ್ನು ಶಚೀ ಸಮೇತನಾಗಿ ಇಂದ್ರನು ಕುಡಿಯ ಬೇಕೆಂದು ಬಂದು, ಆ
ಕತ್ತೆಯ ಕಾಲಲ್ಲಿ ಒದಿಸಿ ಕೊಂಡು, ಭಯ ಪಟ್ಟು, ಅಮರಾವತಿಗೆ ಓಡಿ
ಹೋದನು. ಇಂಥ ಓಲೇ ವನಕ್ಕೆ ನಾವು ಹೋದರೆ, ಬದುಕೇವೇನಪ್ಪಾ?
ಅಂದರು. ಅದಕ್ಕೆ ಕೃಷ್ಣನು ಅವರನ್ನು ಕುರಿತು ಅಯ್ಯೋ, ಬಾಳೆ! ನಿಮ್ಮ

ಭವಿಷ್ಯವು ಕಂಡ ಹಾಗಾಯಿತು. ಒಂದು ಕತ್ತೆಗೆ ಹೆದರಿ ಕೊಂಡು, ಅಲ್ಲಿಗೆ ಹೋಗಿ, ಹಣ್ಣನ್ನು ತಿನ್ನದೆ ಇರುವದೋ? ಎಂದು ಹೇಳಿ, ಅಲ್ಲಿಗೆ ತಾನು ಹೋದನು. ಜೊತೆಯುವರೆಲ್ಲರು ಹೆದರಿ ಕೊಂಡು ಹೋಗದೆ, ದೂರದಲ್ಲಿಯೇ ನಿಂತರು. ಓಲೇ ವನಕ್ಕೆ ಬಂದ ಕೃಷ್ಣನನ್ನು ಕಂಡು, ಕತ್ತೆಯ ರೂಪಿನ ಧೇನುಕನೆಂಬ ರಾಕ್ಷಸನು—ಒದೆದು, ಕಚ್ಚಿ, ಕೊಂದು, ತಿನ್ನುವೆನೆಂದು ಕೃಷ್ಣನ ಬಳಿಗೆ ಬರಲು; ಕೃಷ್ಣನು ಅದರ ಆರ್ಭಟೆಗೆ ಅಂಜದೆ, ನಾಲ್ಕು ಕಾಲುಗಳನ್ನು ತನ್ನ ಕೈಯಿಂದ ಹಿಡು ಕೊಂಡು,—ಓಲೇ ಮರದ ಹಣ್ಣಿನ ಗೊನೆಗಳನ್ನು ಕೆಡಹುವದಕ್ಕೆ ಇದೇ ದೊಣ್ಣೆ ಆಯಿತೆಂದು ಬೀಸಿ, ಗೊನೆಗಳ ಮೇಲೆ ಇಡುವದು; ಕೆಳಗೆ ಬಿದ್ದರೆ, ಎಚ್ಚತ್ತು ಕೊಳ್ಳದ ಹಾಗೆ ತಿರಿಗಿ ತೆಗೆದು ಕೊಂಡು ಇಡುವದು; ಹೀಗೆ ಇಡುತ್ತ ಇಡುತ್ತ ಬಂದದರಿಂದ, ಆ ರಕ್ಕಸನು ಬಳಲಿ, ಕಂಗೆಟ್ಟು, ಪ್ರಾಣವನ್ನು ಬಿಟ್ಟನು. ಕೃಷ್ಣನು ಜೊತೆಯ ದನಾ ಕಾಯುವವರನ್ನು ಕರೆದು—ಇಗೋ, ಕತ್ತೆಯ ರೂಪಿನ ರಕ್ಕಸನು ಸತ್ತು ಬಿದ್ದಿದ್ದಾನೆ. ಬೇಕಾದಷ್ಟು ಓಲೇ ಹಣ್ಣಿನ ಗೊನೆಗಳು ಕೆಳಗೆ ಬಿದ್ದವೆ. ತಿನ್ನೋಣ, ಬನ್ನಿ, ಎಂದು ಕೂಗಲು; ಅವರೆಲ್ಲರು ಬಂದು, ನೋಡಿ, ಕೃಷ್ಣನ ಮಹಿಮೆಗೆ ಆಶ್ಚರ್ಯ ಪಟ್ಟು, ಸಂತೋಷದಿಂದ ಬೇಕಾದಷ್ಟು ಹಣ್ಣುಗಳನ್ನು ತಿಂದು, ಮುಚ್ಚಂದೇ ವೇಳ್ಯದಲ್ಲಿ ಹಣ್ಣಿನ ಗೊನೆಗಳನ್ನು ಹೊತ್ತು ಕೊಂಡು, ಹಳ್ಳಿಗೆ ಬಂದು, ಈ ಸುದ್ದಿಯನ್ನು ನಂದಗೋಪಾದಿಗಳಿಗೆ ತಿಳಿಸಿದರು. ಅವರೆಲ್ಲರು ಕೇಳಿ, ಬಹಳ ಸಂತೋಷ ಪಟ್ಟರು.

ಮತ್ತೆ ಹೀಗಿರುವಲ್ಲಿ ಒಂದು ದಿನವು ಕೃಷ್ಣ ಬಲರಾಮರು, ಜೊತೆಯ ದನಾ ಕಾಯುವವರು ಸಹ, ಯಮುನಾ ನದಿಯ ಪ್ರಾಂತ್ಯದಲ್ಲಿ ದನಗಳಿಗೆ ಎಳೆ ಹುಲ್ಲುಗಳನ್ನು ಮೇಯಿಸುತ್ತ, ಮಟ್ಟ ಮಧ್ಯಾಹ್ನದಲ್ಲಿ ತಿಳಿ ನೀರುಗಳನ್ನು ಕುಡಿಸಿ, ಆ ಸಮೀಪದಲ್ಲಿರುವ ಒಂದು ದೊಡ್ಡ ಭಾಂಡೀರವೆಂಬ ಆಲದ ಮರದ ನೆಳಲಿಗೆ ಅಟ್ಟಿ ಕೊಂಡು ಬಂದು ನಿಲ್ಲಿಸಲು; ದನಗಳೆಲ್ಲಾ ಅಲ್ಲಿ ಮಲಗಿ ಕೊಂಡು, ಮೆಲಕು ಹಾಕುತ್ತಿದ್ದವು. ಆ ವೇಳೆಯಲ್ಲಿ ಕೃಷ್ಣ ಮೊದಲಾದವರೆಲ್ಲರು ಕೂಡಿ,—ಬಿಸಲು ಮಾಲುವ ವರಿಗೂ ಇಲ್ಲಿ ಕುದುರೆ ಚಂಡನ್ನಾಡುವ; ಸೋತವರು ಗೆದ್ದವರನ್ನು ಹೊತ್ತು ಕೊಂಡಿರ ಬೇಕೆಂದು ಕಟ್ಟೇ ಮಾಡಿ, ಆಡುತ್ತಿರುವಲ್ಲಿ, ಕಂಸನು ಕಳುಹಿಸಿದ ಪ್ರಲಂಬಾಸುರನೆಂಬ ಒಬ್ಬ ರಾಕ್ಷಸನು ಆ ದನಾ ಕಾಯುವ ಹುಡುಗರ ವೇಷವನ್ನು ಹಾಕಿ ಕೊಂಡು, ಅವರೊಳಗೆ ಬಂದು ಶೇರಿ,—ಕೃಷ್ಣನನ್ನು ಕೊಲ್ಲುವದಕ್ಕೆ ತನ್ನಿಂದ ಆಗದೆಂದೆಣಿಸಿ, ಬಲರಾಮನ ಜೊ

ತೆಯಲ್ಲಿ ಆಡುವದಕ್ಕೆ ತೊಡಗಿ, ಆತನಿಗೆ ತಾನು ಸೋತು, ಆತನನ್ನು ಹೊತ್ತು ಕೊಂಡು, ಆಕಾಶಕ್ಕೆ ಹಾರಿ ಹೋಗಲು; ಕೃಷ್ಣನು ಕಂಡು—ಎಲೋ, ಅಣ್ಣಾ, ಇವನು ರಾಕ್ಷಸನು; ನಿನಗೆ ಮೋಸಾ ಮಾಡಿದನು; ಇವನನ್ನು ಬೇಗ ಕೊಂದು ಹಾಕು ಎಂದು ಕೂಗಿ ಹೇಳಿದ್ದರಿಂದ, ಅವನ ಎರಡು ಕೈಗಳನ್ನೂ ಬಲರಾಮನು ಹಿಡು ಕೊಂಡು, ಕುಂಬಾರರ ತಿಗರಿಯ ಹಾಗೆ ತಿರ್‍ರನೆ ಬಹಳ ಹೊತ್ತು ತಿರುಗಿಸಿ, ನೆಲಕ್ಕೆ ಬಡಿದು, ಅಪ್ಪಳಿಸಿ, ಕೊಂದು ಹಾಕಿದನು. ಆ ಮೇಲೆ ಸಾಯಂಕಾಲವಾಗುವಾಗ ಎಲ್ಲರು ಹಳ್ಳಿಗೆ ಬಂದು, ಆ ದಿವಸ ನಡೆದ ಸಮಾಚಾರವನ್ನು ತಿಳಿಸಲು; ಗೋಪಾಲರೆಲ್ಲರು ಈ ಕೃಷ್ಣನನ್ನು ಮಹಾತ್ಮನೆಂದು ಭಾವಿಸಿ, ನಡೆದು ಕೊಳ್ಳುತ್ತಿದ್ದರು.

ಅಷ್ಟರಲ್ಲಿಯೇ ಶರತ್ಕಾಲವು ಬರಲು; ನಂದಗೋಪಾದಿ ಗೋಪಾಲರೆಲ್ಲರು ಕೂಡಿ, ಈ ಶರತ್ಕಾಲದಲ್ಲಿ ವರುಷಂ ಪ್ರತಿ ವರುಷದಲ್ಲಿಯೂ ತಾವು ಮಾಡುತ್ತಿದ್ದ ಕಟ್ಲೆಯ ಪ್ರಕಾರ, ದೇವೇಂದ್ರನನ್ನು ಕುರಿತು ಮಾಡುವ ಪೂಜೆಯನ್ನು ಮಾಡ ಬೇಕೆಂದು ಯೋಚಿಸಿ, ಎಲ್ಲರು ಆ ದೇವೇಂದ್ರನ ಹಬ್ಬಕ್ಕೆ ಬೇಕಾದ ಸೋಬಸ್ಕರಗಳನ್ನು ಕೂಡಿಸುತ್ತಿರುವಲ್ಲಿ, ಕೃಷ್ಣನು ಅವರ ಬಳಿಗೆ ಹೋಗಿ,—ಇದೆಲ್ಲಾ ಯಾಕೆ? ಎಂದು ಕೇಳಲು; ಅವರು—ಎಲೈ, ಕೃಷ್ಣನೇ, ದೇವೇಂದ್ರನು ಮಳೆಯನ್ನು ಕರೆಯುವದರಿಂದ, ಕಾಡುಗಳಲ್ಲಿ, ಬೆಟ್ಟಗಳಲ್ಲಿ, ಹುಲ್ಲು ನೀರು ಉಂಟಾಗಿ, ನಮ್ಮ ದನಗಳು ಸೊಂಪಿನಿಂದ ಮೇದು, ಹೆಚ್ಚುವದರಿಂದಷ್ಟೆ ನಾವು ಬದುಕುವದು! ಆದ್ದರಿಂದ ದೇವೇಂದ್ರನ ಹಬ್ಬವನ್ನು ಮಾಡುತ್ತೇವೆ, ಅಂದರು. ಅದಕ್ಕೆ ಕೃಷ್ಣನು—ದೇವೇಂದ್ರನಿಂದ ನಮಗೇನು ಪ್ರಯೋಜನ? ನಮ್ಮ ದನಗಳಿಗೆ ಹುಲ್ಲು ನೀರು ಕೊಡುವಂಥಾದ್ದು ಈ ಗೋವರ್ಧನ ಪರ್ವತವು. ಇದರ ಹಬ್ಬವನ್ನೇ ಮಾಡ ಬೇಕೆನಲು; ಅವರೆಲ್ಲರು ಕೃಷ್ಣನ ಮಾತಿನ ಮೇರೆ ಗೋವರ್ಧನ ಪರ್ವತಕ್ಕೆ ಹಬ್ಬಾ ಮಾಡಿದ್ದರಿಂದ, ದೇವೇಂದ್ರನು ಕೋಪಿಸಿ ಕೊಂಡು, ಗೊಲ್ಲರ ಹಳ್ಳಿಗಳೆಲ್ಲಾ ತೇಲಿ ಹೋಗುವ ಹಾಗೆ ಮಳೆಯನ್ನು ಕರೆಯುವದಕ್ಕೆ ಪ್ರಾರಂಭಾ ಮಾಡಿದ್ದರಿಂದ, ಕೃಷ್ಣನು ಗೋವರ್ಧನ ಪರ್ವತವನ್ನು ಎತ್ತಿ, ಕೊಡೆಯಾಗಿ ಹಿಡಿದು, ಗೋವುಗಳನ್ನೂ ಗೊಲ್ಲರನ್ನೂ ಕಾಪಾಡಿದನು.

ಆ ಬಳಿಕ ಮಥುರಾ ಪಟ್ಟಣದಲ್ಲಿ ಕಂಸಾಸುರನು ನಾರದ ಮಹಾ ಮುನಿಯ ಮುಖ ವಚನದಿಂದ ತನ್ನನ್ನು ಕೊಲ್ಲುವ ದೇವಕಿಯ ಎಂಟನೇ ಮಗನಾದ ಕೃಷ್ಣನು ಗೋಕುಲದಲ್ಲಿ ಬೆಳೆಯುವದಾಗಿಯೂ, ತಾನು ಕಳುಹಿಸಿದ್ದ ಪೂತನಿ ಮೊದಲಾದ ದೈತ್ಯರನ್ನೆಲ್ಲಾ ಆತನೇ ಕೊಂದದ್ದಾಗಿಯೂ ಕೇಳಿ, ಬಹಳ

ಚಿಂತಾಕ್ರಾಂತನಾಗಿ,—ಹಗೆಯನ್ನು ಹೆಚ್ಚಾಗಿ ಬೆಳಸ ಕೂಡದು, ಎಳಕಿನಲ್ಲಿಯೇ
ಕೊಂದು ಹಾಕ ಬೇಕೆಂಬೆಣಿಸಿ, ಅಕ್ರೂರನನ್ನು ಬೃಂದಾವನಕ್ಕೆ ಕಳುಹಿಸಿ,
ಕೃಷ್ಣ ಬಲರಾಮರನ್ನು ಮಧುರಾ ಪುರಿಗೆ ಕರಿಸಿ ಕೊಂಡು, ಕುವಲಯಾಪೀಡ
ವೆಂಬ ಆನೆಯನ್ನೂ ಮುಷ್ಟಿಕ, ಚಾಣೂರರೆಂಬ ಜಟ್ಟಿಗಳನ್ನೂ ಅವರನ್ನು
ಕೊಂದು ಹಾಕುವ ಹಾಗೆ ಕಳುಹಿಸಲು; ಅವರಿಬ್ಬರು ಆ ಆನೆಯನ್ನೂ ಆ ಜ
ಟ್ಟಿಗಳನ್ನೂ ಮಲ್ಲ ಯುದ್ಧದಲ್ಲಿ ಕೊಂದು ಹಾಕಿದರು.

ಆ ಮೇಲೆ ಶ್ರೀ ಕೃಷ್ಣನು ಸಿಂಹಾಸನದ ಮೇಲೆ ಕುಳಿತಿರುವ ಕಂಸನನ್ನು
ಜುಟ್ಟು ಹಿಡಿದು, ಕೆಳಗೆ ಕೆಡವಿ ಕೊಂಡು, ತನ್ನ ಕಾಲಿನಿಂದ ಹೊರಚಿ, ತುಳಿ
ದು, ಕೊಂದು ಹಾಕಿ, ಯಥಾ ಪ್ರಕಾರ ಅವನ ತಂದೆಯಾದ ಉಗ್ರಸೇನನಿಗೆ
ಯಾದವರ ಪಟ್ಟವನ್ನು ಕಟ್ಟಿ, ರುಕ್ಮಿಣಿ ಸತ್ಯಭಾಮೆ ಮೊದಲಾದ ಅಷ್ಟ ಮಹಿ
ಷಿಗಳನ್ನೂ, ನರಕಾಸುರನೆಂಬ ರಾಕ್ಷಸನನ್ನು ಕೊಂದು, ಅವನು ಶೆರೆಯಲ್ಲಿ ಇ
ಟ್ಟಿದ್ದ ಹದಿನಾರು ಸಾವಿರ ದೇವ ಕನ್ನಿಕೆಗಳನ್ನೂ ಮದುವೆಯಾಗಿ, ಅವರಲ್ಲಿ
ಮನ್ಮಥ, ಸಾಂಬ ಮೊದಲಾದ ಮಕ್ಕಳನ್ನು ಪಡೆದು, ಇನ್ನು ಹಂಸ, ಡಿಬಿಕ,
ಮುರ, ಸಾಲ್ವ, ಮೊದಲಾದ ಅನೇಕ ದೈತ್ಯರನ್ನು ಸಂಹರಿಸಿ, ವೈಕುಂಠದ ದ್ವಾ
ರಪಾಲಕರಾದ ಜಯ ವಿಜಯರು ಮೂರನೇ ಜನ್ಮದಲ್ಲಿ ಶಿಶುಪಾಲ ದಂತವ
ಕ್ರರೆಂಬ ಹೆಸರಿನಿಂದ ಹುಟ್ಟಿ ಇದ್ದದರಿಂದ ಅವರಿಬ್ಬರನ್ನೂ ಸಂಹರಿಸಿ, ಪಾಂಡವ
ರಿಗೆ ಸಹಾಯವನ್ನು ಮಾಡಿ, ಭಾರತ ಯುದ್ಧದಲ್ಲಿ ಜರಾಸಂಧ, ಕೌರವ, ಜ
ಯದ್ರಥ, ಶಲ್ಯ, ದೃಪದ, ಕೇಕಯ, ವಿರಾಟ, ತ್ರಿಗರ್ತ, ಭೂರಿಶ್ರವ, ಮುಂತಾದ
ಅನೇಕ ದುಷ್ಟ ಧೊರೆಗಳನ್ನು ಕೊಲ್ಲಿಸಿ, ಹಸ್ತಿನಾವತೀ ಪಟ್ಟಣದಲ್ಲಿ ಧರ್ಮ
ರಾಯನಿಗೆ ಪಟ್ಟವನ್ನು ಕಟ್ಟಿ, ಭೂಮಿಯ ಭಾರವನ್ನು ಇಳಿಸಿ, ತನ್ನ ಮನುಷ್ಯ
ಶರೀರವನ್ನು ಭೂಮಿಯಲ್ಲಿ ಬಿಟ್ಟು, ವೈಕುಂಠಕ್ಕೆ ತೆರಳಿದನು.

### 83. The Ninth or Bouddha Incarnation.

### ೮೩. ಬೌದ್ಧಾವತಾರದ ಕಥೆ.

ಪೂರ್ವದಲ್ಲಿ ತಾರಕಾಸುರನೆಂಬ ರಾಕ್ಷಸನು ಬಹು ಪರಾಕ್ರಮ ಶಾಲಿಯಾ
ಗಿ, ಇಂದ್ರಾದಿ ದೇವತೆಗಳಿಗೆ ಬಹಳವಾಗಿ ತೊಂದರೆ ಪಡಿಸಿದ್ದರಿಂದ, ಈಶ್ವರನ
ಮಗನಾದ ಷಣ್ಮುಖನು ದೇವತೆಗಳಿಗೆ ಸೇನಾ ಪತಿಯಾಗಿ, ಆತನನ್ನು ಸಂಹಾರ
ಮಾಡಿದನು. ಆತನ ಮಕ್ಕಳಾದ ತಾರಕಾಕ್ಷನೂ, ಕಮಲ ಲೋಚನನೂ, ವಿ
ದ್ಯುನ್ಮಾಲಿಯೂ, ಎಂಬ ಮೂರು ಮಂದಿಯು ಬ್ರಹ್ಮನನ್ನು ಕುರಿತು ಬಹಳವಾ
ಗಿ ತಪಸ್ಸು ಮಾಡಿ, ಮೆಚ್ಚಿಸಿ, ಪ್ರತ್ಯಕ್ಷವಾಗಿ ಬಂದ ಬ್ರಹ್ಮನನ್ನು ಕುರಿತು—ತ

ನ್ನು ತಂದೆಯಾದ ತಾರಕನನ್ನು ಕೊಲ್ಲಿಸಿದ ದೇವತೆಗಳೆಂಬ ಮೃಗಗಳ ಬೇಟೆಯನ್ನು ಆಡ ಬೇಕೆಂದು, ತಮ್ಮ ಮನಸ್ಸಿನಲ್ಲಿ ಎಣಿಸಿ,—ಎಲೈ, ಚತುರ್ಮುಖನೇ, ನಮಗೆ ಅಮರತ್ವವು ಉಂಟಾಗುವ ಹಾಗೆಯೂ, ದೇವಾಸುರರು ಮುಂತಾದವರೆಲ್ಲರು ನಮಗೆ ಸೇವಕರಾಗಿ, ನಮ್ಮನ್ನು ಓಲೈಸಿ ಕೊಂಡಿರುವ ಹಾಗೆಯೂ, ಯಾರಿಂದಲೂ ಜೈಸಲಶಕ್ಯವಾದ ಮೂರು ಪಟ್ಟಣಗಳು ಆಕಾಶ ಮಾರ್ಗದಲ್ಲಿ ಉಂಟಾಗುವ ಹಾಗೆಯೂ, ಈ ಮೂರು ವರಗಳನ್ನು ಕೊಡ ಬೇಕೆಂದು ಬೇಡಿ ಕೊಂಡದ್ದಕ್ಕೆ, ಬ್ರಹ್ಮ ದೇವನು—ಹುಲಿಗೆ ಧೈರ್ಯವನ್ನೂ, ಕತ್ತಲೆಗೆ ಕಾಠಿಣ್ಯವನ್ನೂ, ಕುಲ ಗಿರಿ ಮುಂತಾದ ಬೆಟ್ಟಗಳಿಗೆ ಚೈತನ್ಯವನ್ನೂ, ಆನೆಗಳಿಗೆ ಸೂಕ್ಷ್ಮ ಬುದ್ಧಿಯನ್ನೂ, ಕೊಲೆಗಡಿಕರಿಗೆ ನಿತ್ಯ ದೇಹವನ್ನೂ, ನಾನು ಒಲಿದು ಕೊಟ್ಟರೆ, ಲೋಕಕ್ಕೆ ಲೇಸಾಗುವದೇ? ಈ ದುಷ್ಟರು ಇಂಥ ವರಗಳನ್ನು ಕೇಳಿದರಲ್ಲ! ಶಿವ ಶಿವಾ! ಇದಕ್ಕೇನು ಮಾಡಲಿ? ಎಂದು ಒಂದು ಘಳಿಗೆ ಯೋಚಿಸಿ, ನಿಶ್ಶ್ವಸಿ, ಬಳಿಕ ಆ ಮೂರು ಜನವನ್ನು ಕುರಿತು—ನಿಮಗೆ ಆಕಾಶದಲ್ಲಿ ಮೂರು ಪುರಗಳು ಉಂಟಾಗುವವು. ಇಂದ್ರಾದಿ ನಿರ್ಜರರೆಂಬ ನೊರಜುಗಳನ್ನು ನೀವು ಸದೆ ಬಡಿದು, ನಿಮ್ಮ ಸೇವೆ ಮಾಡಿಸಿ ಕೊಳ್ಳಿ. ನಿಮ್ಮ ಮೂರು ಪಟ್ಟಣಗಳು ದಿವ್ಯ ಸಾವಿರ ವರುಷಕ್ಕೆ ಒಂದು ವೇಳೆ ಕೂಡುವವು. ಆ ವೇಳೆಯಲ್ಲಿ ಯಾವ ಒಬ್ಬನು ಒಂದೇ ಬಾಣದಿಂದ ನಿಮ್ಮ ಪಟ್ಟಣವನ್ನು ಕಡಿದು ಹಾಕುವನೋ, ಆ ವೇಳೆಯಲ್ಲಿ ನಿಮಗೆ ಸಾವು ಉಂಟಾಗುವದೇ ಹೊರತು, ಅದರ ನಡುವೆ ನೀವು ಸಾಯುವದಿಲ್ಲ; ಹೋಗಿ! ಎಂದು ವರವನ್ನು ಕೊಟ್ಟು, ಅದೃಶ್ಯನಾದನು.

ಆ ದುರುಳರು—ಅಂಥಾ ಕಾಲ ಬಂದಾಗ್ಯೆ ನೋಡಿ ಕೊಳ್ಳೋಣ ಎಂದು ಅಲ್ಲಿಂದ ಹೊರಟು ಬಂದು, ದೈತ್ಯರ ಬಡಗಿಯಾದ ಮಯನನ್ನು ಕರಿಸಿ, ಮೂರು ಪುರವನ್ನು ರಚಿಸಿ ಕೊಂಡು, ಅದರಲ್ಲಿ ಇದ್ದು ಕೊಂಡು, ಇಂದ್ರಾದಿ ದೇವತೆಗಳನ್ನೆಲ್ಲಾ ಸದೆ ಬಡಿದು, ಅವರ ಕಡೆಯಿಂದ ಸೇವೆಯನ್ನು ಮಾಡಿಸಿ ಕೊಳ್ಳುತ್ತ, ಅತ್ಯುನ್ನತರಾಗಿ ಇದ್ದರು. ಆಗ ಇಂದ್ರಾದಿ ದೇವತೆಗಳೆಲ್ಲಾ ಕೂಡಿ, ಕೈಲಾಸಕ್ಕೆ ಹೋಗಿ, ಶಿವನಿಗೆ ಅಡ್ಡ ಬಿದ್ದು, ತಮಗೆ ಉಂಟಾಗಿರುವ ತಾರಕನ ಮಕ್ಕಳ ಬಾಧೆಯನ್ನು ಹೇಳಿ ಕೊಂಡು, ಮೊರೆ ಇಡಲು; ಶಂಕರನು ಆ ದೇವತೆಗಳನ್ನು ಕುರಿತು—ಎಲೇ, ದೇವತೆಗಳಿರಾ, ಈ ಕೆಲಸವು ನನ್ನಿಂದ ಸಾಗದು. ಯಾಕೆಂದರೆ, ಅವರ ಮೂರು ಪಟ್ಟಣಗಳು ದಿವ್ಯ ಸಹಸ್ರ ವರುಷಕ್ಕೆ ಒಂದು ವೇಳೆ ಕೂಡುವವು. ಆ ಕೂಡಿದ ವೇಳೆಯಲ್ಲಿ ಒಂದೇ ಬಾಣದಿಂದ ಆ ಪುರವನ್ನು

ಕಡಿದಾಗ, ಅವರಿಗೆ ಸಾವು ಬರುವದೆಂದು, ಬ್ರಹ್ಮನ ವರವಾಗಿರುವದು. ಅದು ಅಲ್ಲದೆ, ತಾರಕನ ಮಕ್ಕಳು ವೇದ ಮಾರ್ಗವನ್ನು ಎಳ್ಳಷ್ಟಾದರೂ ಮೀರದೆ, ವೇದಗಳಲ್ಲಿ ಹೇಳಿರುವ ಪ್ರಕಾರವೇ ಕರ್ಮಗಳನ್ನು ಮಾಡುತ್ತ, ಬಹಳ ಪರಿ ಶುದ್ಧರಾಗಿರುವರು. ಆದ್ದರಿಂದ ಆ ಪುರವನ್ನು ಕಡಿಯುವದಕ್ಕೆ ವಿಷ್ಣುವೇ ನನಗೆ ಬಾಣವಾಗಿ, ಆ ದೈತ್ಯರು ವೇದ ಮಾರ್ಗವನ್ನು ಬಿಟ್ಟು, ಯುಕ್ತಿ ಮಾರ್ಗವನ್ನು ಹಿಡಿದು ನಡೆಯುವ ಹಾಗೆ, ಯಾವ ಉಪಾಯದಿಂದಲಾದರೂ ಮಾಡಿದರೆ, ನಾನು ಅವರನ್ನು ಸಂಹರಿಸಿ, ನಿಮಗೆ ಸುಖವನ್ನು ಮಾಡುವೆನು ಎಂದು ಹೇಳಿ, ಅವರನ್ನು ಕರೆದು ಕೊಂಡು, ಮಹಾ ವಿಷ್ಣುವಿನ ಬಳಿಗೆ ಹೋಗಿ, ಈ ವಿವರಗಳನ್ನೆಲ್ಲಾ ತಿಳಿಸಲು;—ಒಳ್ಳೇದು, ಹಾಗೇ ಆಗಲಿ ಎಂದು, ಅಭಯವನ್ನು ಕೊಟ್ಟು, ಶಿವನಿಗೆ ಭೂಮಿಯನ್ನೇ ರಥವನ್ನು ಮಾಡಿ, ನಾಲ್ಕು ವೇದಗಳನ್ನೇ ಆ ರಥಕ್ಕೆ ಕುದುರೆಗಳಾಗಿಯೂ, ಚಂದ್ರ ಸೂರ್ಯರನ್ನೇ ರಥದ ಚಕ್ರಗಳಾಗಿಯೂ, ಬ್ರಹ್ಮ ದೇವರನ್ನೇ ಸಾರಥಿಯಾಗಿಯೂ, ಮಾಡಿಸಿ ಕೊಟ್ಟು, ಆ ರಥದಲ್ಲಿ ಆತನನ್ನು ಕೂರಿಸಿ, ಮಹಮ್ಮೇರು ಪರ್ವತವನ್ನು ಬಿಲ್ಲಾಗಿ ಮಾಡಿ, ಆ ಬಿಲ್ಲಿಗೆ ಮಹಾ ಶೇಷನು ಹೆದೆಯಾಗಿಯೂ, ತಾನು ಬಾಣವಾಗಿಯೂ, ಅವನ ಕೈಯಲ್ಲಿ ಇರುವ ಹಾಗೆ ಮಾಡಿ ಕೊಟ್ಟು—ದೇವತೆಗಳ ಸಮೂಹದೊಡನೆ ಹೋಗಿ, ತಾರಕನ ಮಕ್ಕಳೊಡನೆ ಕಾದುತ್ತಿದ್ದು,—ಆ ಪಟ್ಟಣಗಳು ಕೂಡಿದ ಕ್ಷಣದಲ್ಲಿ ಬಾಣವಾಗಿರುವ ನನ್ನನ್ನು ಪ್ರಯೋಗಿಸು. ಆಗ ನಾನು ಆ ಪಟ್ಟಣವನ್ನೂ ಅವರನ್ನೂ ಸುಟ್ಟು, ಬೂದಿಯಾಗಿ ಮಾಡುವೆನು ಎಂದು ಹೇಳಿ, ಶಂಕರಾದಿ ದೇವತೆಗಳನ್ನೆಲ್ಲಾ ಕಳುಹಿಸಿ, ತಾನು ಬೌದ್ಧಾವತಾರವನ್ನು ಮಾಡಿ, ಯುಕ್ತಿಯಿಂದ ಸೌಗತವೆಂಬ ಒಂದು ಶಾಸ್ತ್ರವನ್ನು ಕಲ್ಪಿಸಿ, ಆ ಪುಸ್ತಕವನ್ನು ಕೈಯಲ್ಲಿ ತೆಗೆದು ಕೊಂಡು, ತ್ರಿಪುರವನ್ನು ಹೊಕ್ಕು, ಆ ತಾರಕನ ಮಕ್ಕಳಿಗೆ ಕಾಣಿಸಿ ಕೊಳ್ಳಲು; ಅವರು ಈತನ ತೇಜಸ್ಸನ್ನು ನೋಡಿ—ಇವನ್ಯಾರೋ ಮಹಾ ಪುರುಷನೆಂದು ಎಣಿಸಿ, ಎದುರೆದ್ದು ಬಂದು, ಈತನಿಗೆ ಪಾದಾಭಿವಂದನೆಯನ್ನು ಮಾಡಿ, ಷೋಡಶೋಪಚಾರಗಳನ್ನು ರಚಿಸಿ,—ಎಲೈ, ಮಹಾನುಭಾವರೇ, ಎಲ್ಲಿಂದ ಬಂದಿರಿ? ಇಲ್ಲಿ ಬಂದ ಕೆಲಸವೇನು? ನಿಮ್ಮ ದರುಶನದಿಂದ ನಾವು ಧನ್ಯರಾದೆವು ಎಂದು, ಅತಿ ವಿನಯ ಭಯ ಭಕ್ತಿಯಿಂದ ಕುಶಲ ಪ್ರಶ್ನೆಯನ್ನು ಮಾಡಲು; ಈತನು ಅವರನ್ನು ಕುರಿತು—ನಾವು ಭಿಕ್ಷುಕರು. ನಮಗೆ ಊರೆಂಬುವದು ಯಾವದು? ನಮ್ಮ ತಪಸ್ಸು ನಿರಾತಂಕವಾಗಿ ನಡೆಯುವ ಹಾಗೆ ಯಾರು ಪ್ರೀತಿಯಿಂದ ಇರಿಸಿ ಕೊಂಡು ಇರುವರೋ, ಅವ

ರಲ್ಲಿಯೇ ಇದ್ದು ಕೊಂಡು, ತತ್ವ ನಿರ್ಣಯಗಳನ್ನೂ ಧರ್ಮ ಸಾರಗಳನ್ನೂ ಉಪದೇಶಿಸಿ, ಅವರಿಗೆ ಆಶೀರ್ವಾದವನ್ನು ಮಾಡುತ್ತ, ಅವರ ಶ್ರೇಯಸ್ಸನ್ನೇ ಪ್ರಾರ್ಥಿಸಿ ಕೊಂಡು ಇರುವೆವು ಎಂದು ಹೇಳಲು; ಅವರು ಆ ಮಾತನ್ನು ಕೇಳಿ, ಬಹು ಸಂತೋಷ ಪಟ್ಟು, ಈತನಿಗೆ ಒಂದು ಮಠವನ್ನು ಕಲ್ಪಿಸಿ, ಅಲ್ಲಿ ಇಟ್ಟು, ಸಾಯಂ ಪ್ರಾತಃ ಆತನಿಗೆ ವಂದನೇ ಮಾಡುತ್ತ ಬರುತ್ತಿದ್ದರು. ಈ ಬೌದ್ಧನು ಅವರಿಗೆ ಚದುರೋಪಾಯದಿಂದ ತಾನು ಮಾಡಿದ ಸೌಗತ ಶಾಸ್ತ್ರವನ್ನು ಬೋಧಿಸಿ, ಲೌಕಿಕ ಯುಕ್ತಿಯಿಂದ—ಈ ಸೌಗತ ಶಾಸ್ತ್ರವೇ ಸತ್ಯವಾದದ್ದು; ವೇದ ಶಾಸ್ತ್ರವೆಲ್ಲಾ ಸುಳ್ಳು, ಎಂದು ತಿಳಿಯುವ ಹಾಗೆ ಮಾಡಲು; ಅವರು ಮೋಹಿತರಾಗಿ, ವೇದೋಕ್ತ ಕರ್ಮಗಳನ್ನೆಲ್ಲಾ ಬಿಟ್ಟು, ಸೌಗತ ಧರ್ಮವನ್ನು ಕೈಕೊಂಡು, ತಮ್ಮ ಮನಸ್ಸಿಗೆ ಬಂದ ಹಾಗೆ ನಡೆಯುತ್ತಾ ಇದ್ದರು.

ಅಷ್ಟರಲ್ಲಿಯೇ, ಇತ್ತಲಾಗ ಯುದ್ಧ ಮಾಡುತ್ತಲಿರುವ ಈಶ್ವರನು ದೇವಮಾನದ ಸಾವಿರ ವರುಷ ಯುದ್ಧವಾಡುತ್ತಿರುವಲ್ಲಿ, ಆ ತ್ರಿಪುರಗಳು ಕೂಡಲು; ಆ ಕ್ಷಣದಲ್ಲಿ ಮಹಾ ವಿಷ್ಣು ಸ್ವರೂಪವಾದ ತನ್ನ ಬಾಣವನ್ನು ಪ್ರಯೋಗಿಸಿ, ಆ ಮೂರು ಪಟ್ಟಣಗಳನ್ನೂ, ಮೂರು ಮಂದಿ ದೈತ್ಯರನ್ನೂ ಸುಟ್ಟು, ಭಸ್ಮೀಭೂತಾ ಮಾಡಿ, ದೇವತೆಗಳಿಗೆ ಸಂತೋಷವನ್ನು ಉಂಟು ಮಾಡಿದನು. ಆಗಿನಿಂದ ಲೋಕದಲ್ಲಿ ಬಹು ಜನರು ಸೌಗತ ಧರ್ಮವನ್ನು ಅನುಸರಿಸುತ್ತ, ನಡೆದು ಕೊಂಡು, ಬೌದ್ಧರೆನಿಸಿ ಕೊಂಡಿದ್ದಾರೆ.

### 84. The Tenth or Horse Incarnation,

### ೮೪. ಕಲ್ಕ್ಯವತಾರದ ಕಥೆ.

ಕಲಿ ಯುಗದ ಅಂತ್ಯದಲ್ಲಿ, ಭೂಲೋಕದೊಳಗೆ ಯವನ, ಮ್ಲೇಂಛ, ಪುಳಿಂದ, ಕಿರಾತ, ಶಕ, ಚೀಣ, ಮೊದಲಾದ ದುಷ್ಟರು ಪ್ರಭುಗಳಾಗಿ, ಪ್ರಬಲಿಸಿ, ವೇದ ಮಾರ್ಗವನ್ನೂ, ಬ್ರಾಹ್ಮಣ್ಯವನ್ನೂ, ಯಜ್ಞಾದಿ ಕರ್ಮಗಳನ್ನೂ ಕೆಡಿಸಿ, ಜಾತಿ ಸಂಕರಗಳನ್ನು ಮಾಡುತ್ತ, ಭೂ ಮಂಡಲವನ್ನೆಲ್ಲಾ ಆಕ್ರಮಿಸುತ್ತ ಇರಲು; ಕೆಲವು ಕಾಲದ ಮೇಲೆ ತಾಂಬ್ರಪರ್ಣಿ ಎಂಬ ಒಂದು ನದೀ ತೀರದಲ್ಲಿ ಅಗ್ರಹಾರ ವಾಸಿಯಾದ ಒಬ್ಬ ಬ್ರಾಹ್ಮಣನಿಗೆ ಕುಮಾರ ಭಾವದಿಂದ ಅಶ್ವಮುಖನಾಗಿ ಮಹಾ ವಿಷ್ಣುವು ಕಲ್ಕಿ ಎಂಬ ಹೆಸರಿನಿಂದ ಅವತರಿಸಿ, ಕುದುರೆಯ ಮೇಲೆ ಏರಿ ಕೊಂಡು, ಅಸಹಾಯ ಶೂರನಾಗಿ, ತನ್ನ ಕೈ ಕತ್ತಿಯಿಂದ ದುಷ್ಟರಾದ ಮ್ಲೇಂಛರನ್ನೆಲ್ಲಾ ಕೊಂದು, ಶಿಷ್ಟರನ್ನೆಲ್ಲಾ ಸಂರಕ್ಷಿಸಿ, ಧರ್ಮ ಸಂಸ್ಥಾಪನೆಯನ್ನು ಮಾಡಿ, ಭೂ ಮಂಡಲವನ್ನು ರಕ್ಷಿಸುವನು.

———:0:———

# PART

——:0:—

# The Ten Incarnati

———:0:—

## 75. The First or Fis

### ೭೫. ಮತ್ಸ್ಯಾವತ

ಪರಮ ಪದದಲ್ಲಿ ಶ್ರೀಮನ್ನಾರಾಯಣ
ನಿತ್ಯೈಶ್ವರ್ಯವನ್ನು ಅನುಭವಿಸುತ್ತ—ನಾನ
ಸಂಕಲ್ಪ ಮಾಡಿದ್ದಾಗಿ, ವೇದಾಂತದಲ್ಲಿ ಹೇ
ನಿರ್ಮಿಸಿ, ಬಹು ರೂಪಾಗಿ ಲೀಲೈಶ್ವರ್ಯವ
ಲ್ಪಿಸಿ, ಚಿತ್ತು ಅಚಿತ್ತುಗಳೇ ಮೊದಲಾದ
ಸ್ಥೂಲ ಚಿದಚಿತ್ತು ಮೊದಲಾದ ತತ್ವಗಳ
ನನ್ನು ತನ್ನ ನಾಭೀ ಕಮಲದಲ್ಲಿ ಹುಟ್ಟಿಸಿ,
ದ್ವಾಪರ, ಕಲಿಗಳೆಂಬ ನಾಲ್ಕು ಯುಗಗಳ
ದು ಹಗಲು ನಿನಗೆ ಆಗುವದು. ಆ ಹಗಲಿನ
ನ್ನು ಸೃಷ್ಟಿಸು. ಅವುಗಳು ನಿನ್ನ ಹಗಲಿನಲ್ಲಿ
ನಿನ್ನ ರಾತ್ರಿಯಲ್ಲಿ ಅವಾಂತರ ಪ್ರಳಯವನ
ಹಗಲಿನ ಪ್ರಕಾರವೇ ನಾಲ್ಕು ಯುಗಗಳು
ತರ ನೀನು ಮಲಗಿದ್ದು, ಪುನಹ ಬೆಳಗಾಗ
ಈ ರೀತಿಯಲ್ಲಿ ನೂರು ವರುಷ ಪರಿಯಂತ
ದ್ದು, ಆ ನಿನ್ನ ನೂರು ವರುಷದ ಕಡೆಯಲ್ಲಿ
ನೀನು ಯಥಾ ಪ್ರಕಾರ ನನ್ನಲ್ಲಿ ಬಂದು ಶೇ

ಅದನ್ನು ಕೇಳಿ, ಬ್ರಹ್ಮನು ಶ್ರೀಮನ್ನಾರಾ
ಮಿಯೇ, ನಾನು ಯಾವ ಶಕ್ತಿಯಿಂದ ಲೋ
ಹವನ್ನು ಮಾಡಿ ಕೊಳ್ಳಲು; ಮಹಾ ವಿಷ್ಣು
ಉಪದೇಶಿಸಿ, ವೇದ ಪುಸ್ತಕಗಳನ್ನು ಕೊಟ
ತ್ರನ್ನು ಸೃಷ್ಟಿಸು ಎಂದು ಅಪ್ಪಣೇ ಕೊಟ್ಟು
ನಿರ್ಮಿಸಿ, ಅದರ ಮೇಲೆ ಬ್ರಹ್ಮಾಂಡವನ್ನು